ಸಾಧನ ಗ್ರಂಥಾವಲಿ ೧

ಓಂ

ಕೇವಲ!

# ವೇದಾಂತದ ಒಳದಾರಿ

## ( Short cut to Realization )

ತ್ರೈಮಾಸಿಕ ಪರಮಾರ್ಥಸಾಧನೆಯ ಶಿಬಿರದಲ್ಲಾದ

## ಆರು ಪ್ರವಚನಗಳು

( ಮೊದಲನೆ ವರದಿಯೊಂದಿಗೆ ಸೇರಿದೆ )

•

ಸ. ಪ. ಕುಲಕರಣಿ ನಾರಾಯಣರಾಯರು

ಎಂ. ಎ., ಎಲ್‌ಎಲ್. ಬಿ.

—❖—

ಅಖಂಡಾಶ್ರಮ ಬಾಡಮಠ

ಕಾರವಾರ

ಪ್ರಮಾಥಿಯ ನಾಡಹಬ್ಬ ೧೯೩೯ ಬೆಲೆ : [illegible] ಆಣೆಗಳು

ಪ್ರಕಾಶಕರು: ಲಕ್ಷ್ಮಣ ಶಂಕರೆಪ್ಪ ಹೆಗ್ಗಡೆ,
ಅವಧೂತ ಗ್ರಂಥಾಲಯದ ಕಾರ್ಯದರ್ಶಿ,
ಶ್ರೀಶಿವಾನಂದ ಮಂದಿರ, ಹುಬ್ಬಳ್ಳಿ.







ನಮ್ಮೆಲ್ಲ ಪುಸ್ತಕಗಳು ದೊರೆಯುವ ವಿಳಾಸ:

೧. ಆಡಳಿತಗಾರರು: ಸಾಹಿತ್ಯಭಾಂಡಾರ,
ಪುಸ್ತಕ ವ್ಯಾಪಾರಿಗಳು ಮತ್ತು ಪ್ರಕಾಶಕರು, ಹುಬ್ಬಳ್ಳಿ.

೨. ಶ್ರೀಶಿವಾನಂದ ಪ್ರಾವಿಷನ್ ಸ್ಟೋರ್ಸ,
ಕೋಟೆ, ಹರಿಹರ (ಮೈಸೂರು ಸೀಮೆ).



ಮುದ್ರಕರು: ವೆಂಕಟೇಶ ಮಾಧವರಾವ ಜೋಶಿ,
ಮೋಹನ ಮುದ್ರಣಾಲಯ,
ಧಾರವಾಡ.

ಓಂ

ಕೇವಲ!

ಬಾಡಮಠದ ಅಖಂಡಾಶ್ರಮದಲ್ಲಿ ನಡೆದ

# ತ್ರೈಮಾಸಿಕ ಪರಮಾರ್ಥ ಸಾಧನೆಯ

# ಮೊದಲನೇ ವರದಿ

(೮-೧೧-೩೮ ರಿಂದ ೫-೨-೩೯)

●

ಶ್ರೀಗುರು ದತ್ತಾತ್ರೇಯ ತ್ರ್ಯಕ್ಷರೀ ಜಪಯಜ್ಞವು ಆರಂಭವಾದದ್ದು ಅಬ್ಬೀಗೇರಿಯಲ್ಲಿ ತಾ. ೧೪ ಮೇ ೧೯೩೬ನೆಯ ಇಸ್ವಿ ಗುರುವಾರ ದಿವಸ. ಮುಂದೆ ತಾ. ೧೦ನೆಯ ನವ್ಹಂಬರ ಶ್ರೀಗುರುದ್ವಾದಶಿಗೆ ಕಾರವಾರ ಶ್ರೀಮಠದ ಮುಕ್ಕಾಮಿನಿಂದ ಹೊರಡಿಸಿದ ಪ್ರಕಟನೆಯಲ್ಲಿ "ಬೇಗನೆ ಸಂಖ್ಯಾಸಮಾಪ್ತಿಯಾಗಬೇಕು" ಎಂದು ಸಾಧಕರಲ್ಲಿ ಬಿನ್ನವಿಸಲಾಯಿತು. ಆ ಮೇಲೆ ೧೮೬೦ನೆಯ ಬಹುಧಾನ್ಯ ಸಂವತ್ಸರದ ಶ್ರೀಗುರುಪ್ರತಿಪದೆ(ತಾ. ೫-೨-೧೯೩೯)ಗೆ ಜಪಯಜ್ಞ ಸಂಪೂರ್ತಿ ಎಂದೂ, ಅದಕ್ಕೆ ಹೊಂದಿಯೇ ಪರಮಾರ್ಥ ಸಾಧನೆಯ ಮೂರು ತಿಂಗಳ ವಿಶೇಷಾಭ್ಯಾಸದ ವ್ಯವಸ್ಥೆ ಏರ್ಪಡುವದೆಂದೂ, ೫ನೆಯ ಪ್ರಕಟನೆ —(ಆಚಾರ್ಯೋತ್ಸವ ಹಾಗೂ ಶ್ರೀ. ಸ. ಸ್ವ. ಶಿವಾನಂದ ಮಹಾರಾಜರ ಸನ್ಯಾಸ-ಸ್ವೀಕಾರ ಸಮಾರಂಭ)—ಪತ್ರಿಕೆಯ ಪುರವಣಿಯಲ್ಲಿ ಹರಿಹರದಿಂದ ಸಾರಲಾಯಿತು. ಅನಂತರ ತಾ. ೧೮-೮-೧೯೩೮ಕ್ಕೆ ಸಾಧಕರನ್ನು ಆವ್ಹಾನಿಸುವ ಪ್ರಕಟನೆಯೇ ಹೊರಬಿತ್ತು. ಪತ್ರಿಕೆಗಳಲ್ಲಿಯೂ ಪ್ರಸಿದ್ಧವಾಯಿತು. ಪತ್ರವ್ಯವಹಾರ ಮಾಡಿದವರಿಗೆಲ್ಲ ಸಾಧಕರಿಗಾಗಿಯೇ ಇರುವ ನಿಯಮಗಳನ್ನೊಳಗೊಂಡ ಮಾಹಿತೀ ಪತ್ರಿಕೆ ಕಳಿಸಲಾಯಿತು. ಆ ಪತ್ರಿಕೆ ಇಲ್ಲಿ ಇದ್ದಕ್ಕೆ ಇದ್ದ ಹಾಗೆಯೇ ಕೊಡಲ್ಪಟ್ಟಿದೆ.

ಓಂ

ಕೇವಲ!

# ತ್ರೈಮಾಸಿಕ ಪರಮಾರ್ಥ ಸಾಧನೆ

## ಕಾರ್ತಿಕ ಪೌರ್ಣಿಮೆಯಿಂದ ಮಾಘ ಪೌರ್ಣಿಮೆಯ ವರೆಗೆ

## ಸ್ಪಷ್ಟೀಕರಣ ಮತ್ತು ನಿಯಮಗಳು

### ೧. ಉದ್ದೇಶ

ಸಂಕಲ್ಪದಂತೆ ಶ್ರೀಗುರು ದತ್ತಾತ್ರೇಯ ತ್ರ್ಯಕ್ಷರೀ ಜಪದ ೩೩ ಕೋಟಿಯ ಲೆಕ್ಕ ಮುಗಿದುಹೋಗಿದೆ. ಆದರೆ ಬರಿಯ ಸಂಖ್ಯಾಪೂರ್ತಿಯೊಂದೇ ನಮ್ಮ ಜಪಯಜ್ಞದ ಹೇತುವಾಗಿರದೆ ಅದರಲ್ಲಿ ಹೊರಡುವ ಅಧಿಕಾರಿಗಳನ್ನು ಹಿಡಿದುಕೊಂಡು ಅವರಿಗೆ ಯೋಗ್ಯತಾನುಗುಣವಾಗಿ ಸಾಧನ ಮಾಡಿಸಿ ಪುರುಷಾರ್ಥದ ಯಥಾರ್ಥ ಕಲ್ಪನೆ ತಂದುಕೊಡುವದು ಮುಖ್ಯೋದ್ದೇಶ.

ಇಷ್ಟರಲ್ಲಿಯೇ ಸಾಂಗತಾ ವಿಧಾನ ಕೊನೆಗಾಣಬೇಕಿತ್ತು. ಆದರೆ ಶ್ರೀದತ್ತಾವತಾರಿಗಳೆನಿಸಿದ ಗಾಣಗಾಪುರದ ಶ್ರೀಗುರು ನೃಸಿಂಹ ಸರಸ್ವತಿಗಳು ಗುಪ್ತರಾದದ್ದು ಇದೇ ಬಹುಧಾನ್ಯ ಸಂವತ್ಸರದ ಮಾಘ ಕೃಷ್ಣ (ಗುರು) ಪ್ರತಿಪದೆ. ಎಷ್ಟು ಶತಮಾನಗಳಾದರೂ ಆ ಪುಣ್ಯಪ್ರಸಂಗ ಪಾವನ ದಿನಗಳ ಮರೆವಾದೀತೇ ದತ್ತಭಕ್ತರಿಗೆ? ಈ ಸುಮುಹೂರ್ತ ಸಾಧಿಸಲೆಂದೇ ಈ ಸಮಾರಂಭ ಇಷ್ಟುದಿನ ಮುಂದರಿಸಿದ್ದಾಗಿದೆ.

### ೨. ಸಾಧ್ಯದ ಕಲ್ಪನೆ

ಪರಮಾರ್ಥದ ಸಾಧನ ಸಾಧ್ಯಗಳ ವಿಷಯವಾಗಿ ಬೇಕಾದಷ್ಟು ಭಿನ್ನಾಭಿಪ್ರಾಯಗಳು ತುಂಬಿವೆ. ಇದು ಪ್ರಾಚೀನ ಕಾಲದಿಂದಲೂ ನಡೆದು ಬಂದದ್ದೇ. ಆದರೂ ಜೀವಗಳ ಬುದ್ಧಿಯ ಹೆಚ್ಚುಕಡಿಮೆಯನ್ನೊ

ಪ್ಪಿದ ಮೇಲೆ ಈ ವಿಷಯವಾಗಿ ಅಷ್ಟೊಂದು ಯೋಚನೆಗೊಳಪಡಬೇಕಾದ್ದಿಲ್ಲ. ಅದರಲ್ಲಿಯೂ ಧೀಮಂತ ಅನುಭಾವಿಗಳ ಬಹುಮತದಂತೆ ಏಕರಸ ಬ್ರಹ್ಮಾನುಭವವೇ ಧ್ಯೇಯ; ಜ್ಞಾನದಿಂದಲೇ ಅದರ ಸಿದ್ಧಿ ಅಂದರೆ ಅಸುಖವೆಲ್ಲ ಬಯಲಾಗಿ ಅಭಯಪ್ರಾಪ್ತಿಯಾಗೋಣ. ಈ ಅಖಂಡ ಸಮಾಧಾನವೇ ಜೀವಮಾತ್ರಕ್ಕೂ ಬೇಕಾದ್ದು, ಎಳೆತವೂ ಸದ್ರೂಪದತ್ತ ಕಡೆಗೇ ಇದೆ.

### ೩. ಸಾಧನೆಯ ಅವಶ್ಯಕತೆ

ವಾಸನಾ ವಿಶಿಷ್ಟ ಬುದ್ಧಿಗೆ, ಸಾಧ್ಯದ ಕಲ್ಪನೆ ಫಲಾನುಭವಗಳ ತಾಳತಪ್ಪುವದರಿಂದ ಜಿಜ್ಞಾಸೆ ಬಲಗೊಳ್ಳುತ್ತದೆ. ಸಾಧನದ ಉಪಕ್ರಮವು ಆವಾಗ. ಸಾಧ್ಯದ ವಿಚಾರದೊಡನೆಯೇ ಸಮರಸವಾಗುವ ಶುದ್ಧ-ಪ್ರೇಮಳ-ಗಂಭೀರ ಹೃದಯಕ್ಕೆ ಕೇವಲ ಆತ್ಮವಿಚಾರವೊಂದೇ ಸಾಧನೆ. ಅದಿಲ್ಲದಲ್ಲಿ ಕ್ರಮಬದ್ಧಸಾಧನ ಅಪರಿಹಾರ್ಯ. ಇದೊಂದು ನೋಡಿ ಎಷ್ಟು ವಿಲಕ್ಷಣ ಸಂಗತಿ! ಸ್ವತಃಸಿದ್ಧವಾದ ಸ್ವಾನಂದ, ಸಾಧನದಿಂದ ಸಿದ್ಧಿಸಬೇಕಾಗಿದೆ. ಮೊದಲು ನಾವೇ ತಪ್ಪು ತಿಳಿದುಕೊಂಡು ಆಮೇಲೆ ಅದನ್ನು ಕಷ್ಟಪಟ್ಟು ತಿದ್ದಿಕೊಳ್ಳುತ್ತಾ ನಂತರ ಓಹೋ, ವಸ್ತುಸ್ಥಿತಿಯೇ ಬೇರೆ; ನಾನು ಭಾವಿಸಿದ್ದೇ ವಿಪರೀತ! ಈಗ ಯಥಾರ್ಥವಾಗಿ ಕಂಡುಕೊಂಡೆ, ಪಡಕೊಂಡೆನೆಂಬದಿದು ಕನಸಿನ ಕನವರಿಕೆ. ಅದಿರಲಿ. ಸದ್ಯಕ್ಕೆ ಹಗುರಾದ್ದೋ ಭಾರವಾದ್ದೋ ಸಾಧನದ ಗುದ್ದಿ ಕೊರಳಿಗೆ ಬಿದ್ದುದೇಸೋ ನಿಜ.

### ೪. ಯೋಜನೆ

"ಕೂಳಿಲ್ಲದ ಬಾಯಿಗೆ ವೀಳ್ಯದ ಜಂಭ"ವೆಂಬಂತೆ ತಮ್ಮಲ್ಲಿಯ ಕೊರತೆಗಳನ್ನರಿತ ಪ್ರಾಮಾಣಿಕ ಸಾಧಕರು ಬರಿಯ ಬೌದ್ಧಿಕ ಸಮಾಧಾನದ ಬಲಿಗೆ ಬೀಳುವದಿಲ್ಲ. ಪೂರ್ಣತ್ವಕ್ಕಾಗಿ ಹಾತೊರೆಯುವ ಇವರಲ್ಲಿ ಹಟದ ಹುಂಬತನವಿರುವದಿಲ್ಲ, ದಿಟದ ತವಕವಿರುತ್ತದೆ. ಸಾಧಕರನ್ನು ಶ್ರೇಯಸ್ಸಿಗೇರಿಸುವ ಸದ್ಭಾವ ಇದು.

ಇಂಥ ಜಿಜ್ಞಾಸುಗಳಿಗೆ ಸಾಕ್ಷಾತ್ತಾಗಿ ಧೈರ್ಯ, ಸ್ಥೈರ್ಯ

ಕೊಡತಕ್ಕ ಅಧ್ಯಾತ್ಮವಿದ್ಯೆ, ಅದರ ಸಾಂಪ್ರದಾಯ ಮತ್ತು ಪ್ರವರ್ತಕರ ಪ್ರವಾಹ ಕೂಡ ಬತ್ತಿ ಹರಿಗಡಿದಂತಾಗಿದೆ. ಅಲ್ಲಲ್ಲಿ ನಿಂತಂತಿರುವಂಥವು ಮಲೆತು ವಿಕಾರಗೊಂಡಿದೆ. ವೈಯಕ್ತಿಕ ಶುಷ್ಕವೈಶಿಷ್ಟ್ಯಾಭಿಮಾನದ ಒಡ್ಡೊಡೆದು ಸಾಂಘಿಕವಾಗಿ ಸಾಂಪ್ರದಾಯ ಸಾಧನೆಗಳು ಬಳಿಕೆಗೆ ಬಂದ ವಿನಾ ಈ ದುಃಸ್ಥಿತಿ ಹಿಂಗಿದ್ದಲ್ಲ. ಭಗವಾನ್ ಯಾಜ್ಞವಲ್ಕ್ಯರ ಕಾಲದ ಪರಿಸ್ಥಿತಿಯ ಪರಿಶೀಲನದಿಂದ ಇದೇ ಮಾತು ಮಂದಟ್ಟಾಗುವದಿಲ್ಲವೇ ?

ಆಚಾರ್ಯರ ಜ್ಞಾನಸಾಂಪ್ರದಾಯದಲ್ಲಿ ಈ ಪದ್ಧತಿ-ರೀತಿ ಅಲ್ಪ ಪ್ರಮಾಣದಿಂದಾದರೂ ಅಚ್ಚಳಿಯದೆ ಉಳಿದದೆ. ಅದೀಗ ಈ ಉಪಾಸನಾ ಸತ್ರದ ಶ್ರೇಯಸ್ಸ್ಥಾನದಲ್ಲಿ ಯೋಜಿಸಲ್ಪಟ್ಟಿದೆ.

**೫. ರೂಪರೇಷೆ**

ದೇಹ, ಪ್ರಾಣ, ಮನಗಳ ಶುದ್ಧಿಯಿಂದ ಸಾಧನೆಗೆ ಆರಂಭ; ಸಂಯಮದಿಂದೊಡಗೂಡಿದ ವಿವೇಕಪೂರ್ಣ ಏಕಾಂತಿಕ ಉಪಾಸನೆಯಲ್ಲಿ ಪ್ರಗತಿ; ಸಮದೃಷ್ಟಿಯ ಸದಾ ಸಮಾಧಾನ, ಅಂತರ್ಬಾಹ್ಯ ಏಕತಾನುಭವ, ಸತ್‌ಗುಣಗಳ ಸ್ವಾಭಾವಿಕತೆಯಲ್ಲಿ ಪರ್ಯವಸಾನವಾಗುತ್ತದೆ. ಸಾಧಕರ ತ್ರಿಕರಣಗಳ ಸಾಮರ್ಥ್ಯಾನುಸಾರ ಸಾಧನಾಭ್ಯಾಸದಲ್ಲಿ ಪ್ರಗತಿ ಖಂಡಿತ. ಈ ವಿಷಯದಲ್ಲಿ ಏನೊಂದೂ ವಿಶೇಷವಾಗಿ ಭಾವಿಸಿಕೊಳ್ಳಬೇಕಾದ್ದಿಲ್ಲ. ಸಾತ್ವಿಕವಾತಾವರಣ, ಸತ್ಸಂಗತಿ, ನಿಯಮಿತ ಅಭ್ಯಾಸದಾರ್ಢ್ಯವಿದ್ದಲ್ಲಿ ತಜ್ಞಯೋಜಕರ ಸಹಕಾರವಾದ ಬಳಿಕ ಸಿದ್ಧಿ ಸದಸಾಧ್ಯವದಾವುದು ?

**೬. ಆಶ್ವಾಸನ**

ಪರಮಾರ್ಥದ ಭಾರೀ ಹಸಿವು ಹುಟ್ಟಿದ ಮೇಲೆ ಸಮಾಧಾನಕ್ಕೆ ಇನ್ನೂ ಬಹುಕಾಲ ಬೇಕೆಂಬ ಉಪದೇಶ ವಿಸಂಗತ. ಬರಿಯ ಪಂಟಿನ ವರಿಗೆ ಮಾತ್ರ ಅನೇಕ ಜನ್ಮಗಳ ಗಂಟು ಬಿಟ್ಟದ್ದಲ್ಲ. ಆತ್ಮಾನುಭವದ ವಿಷಯದಲ್ಲಿ ನಿರಾಶೆಯ ಉದ್ಗಾರಕ್ಕೆ ಅವಕಾಶವೇ ಇಲ್ಲವೆಂಬದಿದು ಅಗಳಾಡಿಸಿ ಜಡೆದ ಗೂಟದಂತಹ ಸಿದ್ಧಾಂತ. ವೇದೋಪನಿಷತ್ಕಾಲದ

ದೃಷ್ಟಾಂತಗಳಂತೂ ಇರಲಿ. ಮಧ್ಯಯುಗದ ರಾಜಾ ಖಟ್ವಾಂಗ, ಅರ್ಜುನ, ಪರೀಕ್ಷಿತ ಹಾಗು ಇತ್ತೀಚಿನ ಅನೇಕ ಸತ್ಪುರುಷರ ಉದಾಹರಣೆಗಳೆಲ್ಲಾ ಗಣಿತ ಪುಸ್ತಕದೊಳಗಿನ ಅ–ಬ–ಕಗಳಲ್ಲ! ಮುಮುಕ್ಷುತ್ವ ಜಾಗೃತವಾಗುವುದೊಂದೇ ತಡ; ಕೈತೊಳೆದು ಬೆನ್ನುಹತ್ತಿದ್ದೇ ಆದರೆ ಆದಾದರೂ ಎಷ್ಟೊತ್ತಿನದು?

ಅದು ಕಾರಣ ಪರಮಾರ್ಥವೇ ಗುರಿಯಾಗಿದ್ದವರಂತೂ ಸರಿಯೇ; ಅವರಲ್ಲದೆ ಈ ವಾತಾವರಣ ಹುಟ್ಟಿಸಿಕೊಳ್ಳಬೇಕು, ಬೆಳೆಸಿಕೊಳ್ಳಬೇಕೆಂಬವರು; ಸ್ವತಂತ್ರ ಸಾಧನೆಮಾಡಿ ದಣಿದು ನಿರಾಶರಾದವರು; ಈ ವಿಷಯವಾಗಿ ವಿಪರೀತ ಕಲ್ಪನೆ ಇದ್ದರೂ ಪ್ರಯತ್ನಬುದ್ಧಿಯಿಂದ ಪ್ರಯೋಗಕ್ಕೆ ಸಿದ್ಧರಾಗಿದ್ದ ಉತ್ಸಾಹಿಗಳು ಕೂಡ ಅಗತ್ಯ ಬರಬಹುದು. ಹೃತ್ಪೂರ್ವಕ ಸ್ವಾಗತವಿದೆ. ನಮ್ಮ ಸಮನ್ವಯ ಸಾಧನ ಪದ್ಧತಿ ಎಂಥವರಿಗೂ ಎಂಥ ಪರಿಸ್ಥಿತಿಯಲ್ಲಿಯೂ ಕೈಗೂಡುವಂತಹದು.

ಇಲ್ಲಿ ಚನ್ನಾಗಿ ನೆನಪಿಡಬೇಕಾದ್ದೊಂದು ಸಂಗತಿಯೆಂದರೆ— ಬಾಕಿಯ ಭಾವನೆ ಬೇಕಾದ್ದಿರಲಿ, ಮುಖ್ಯವಾಗಿ ಅಂತಃಕರಣಪೂರ್ವಕ ಪರಮಾರ್ಥದ ಅಪೇಕ್ಷೆಯೊಂದೇಒಂದು ತೀವ್ರವಾಗಿರಬೇಕಾದ್ದು. ಇದೊಂದಿದ್ದವರು ಶ್ರದ್ಧೆಯಿಂದಾದರೂ ಬನ್ನಿ! ಅಶ್ರದ್ಧೆಯಿಂದಾದರೂ ಬನ್ನಿ! ಅಧಿಕಾರಿಗಳೂ ಬನ್ನಿ! ಅನಧಿಕಾರಿಗಳೂ ಬನ್ನಿ! ಸಾಧಕರು ಅಭ್ಯಾಸಕ್ಕಾಗಿ, ಸಿದ್ಧರು ಪರೀಕ್ಷೆಗಾಗಿ ಬನ್ನಿ! ಜಾತಿ, ಲಿಂಗ, ಸಾಂಪ್ರದಾಯಗಳ ನಿರ್ಬಂಧವಿಲ್ಲ. ದುರಭಿಮಾನಕ್ಕೆಡೆ ಇಲ್ಲದ ವರ್ಣಾಶ್ರಮ ಪದ್ಧತಿ ಮಾತ್ರ ತಪ್ಪಿದ್ದಲ್ಲ!

ಸ್ವಂತದ ನಿಶ್ಚಯದಿಂದ ಸದ್ಭಾವಯುಕ್ತರಾಗಿ ಸತ್‌ಸಾಂಪ್ರದಾಯ ಸಾಧನೆ ಮಾಡುವವರಿಗೆ ಸರ್ವಶಕ್ತಿಯ ಸಕ್ರಿಯ ಸಹಾನುಭೂತಿ ಸ್ವಾಭಾವಿಕ.

ಹುಬ್ಬಳ್ಳಿ
ನಾಡಹಬ್ಬ, ಚಾ. ವಿ. ವ.
೧೮೩೩ನೆಯ ಬಹುಧಾನ್ಯ

ತಮ್ಮ,

ಯೋಗೀಶ್ವರ–ದತ್ತಮೂರ್ತಿ.

# ತ್ರೈಮಾಸಿಕ ಪರಮಾರ್ಥ ಸಾಧನೆ

## ಸಾಧಕರ ಸಾಮಾನ್ಯ ನಿಯಮ

೧. ನಿಯಮಿತ ವೇಳೆಗೆ ತಪ್ಪದೆ ನಿತ್ಯವಿಧಿಗಳನ್ನು ಪೂರೈಸಿಕೊಂಡು ಶುಚಿರ್ಭೂತನಾಗಿರಬೇಕು.

೨. ದಿನಾಲು ಡಾಯರಿ ಬರೆಯಬೇಕು. ಅದರಲ್ಲಿ ತನ್ನ ಅಭ್ಯಾಸ, ಅನುಭವಗಳ ಸಾಲುಗಳನ್ನು ತುಂಬಬೇಕು.

೩. ಮೂರು ತಿಂಗಳು ಪೂರಾ ಮೌನದಿಂದಿರಬೇಕು. ಅವಶ್ಯಕ ಪ್ರಸಂಗದಲ್ಲಿ ಮಾತ್ರ ವ್ಯವಸ್ಥಾಪಕರೊಡನೆ ಬರೆಹದ ಮೂಲಕ ಅಭಿಪ್ರಾಯ ತಿಳಿಯಪಡಿಸಬಹುದು.

೪. ಯಾವ ಚಟಗಳಿಗೂ ಆಸ್ಪದವಿಲ್ಲ. ಹವಿಷ್ಯಾನ್ನ ಫಲಾಹಾರಾದಿಗಳನ್ನು ನಿಶ್ಚಿತ ವೇಳೆಗೆ ಎರಡು ಸಲ ತಕ್ಕೊಳ್ಳಬೇಕು. ಹೆಚ್ಚಿನ ತಕರಾರು ನಡೆಯಲಿಕ್ಕಿಲ್ಲ.

೫. ಪ್ರತಿ ತಿಂಗಳಿಗೆ ೧೫ ರೂಪಾಯಿ ಖರ್ಚು ಬರುವದೆಂದಿಟ್ಟುಕೊಂಡಿರಬೇಕು. ನಮ್ಮಲ್ಲಿಂದಲೇ ಪುಕ್ಕಟೆಯಾಗಿ ವ್ಯವಸ್ಥೆಯಾಗುವುದಾದರೆ ಅದು ಯಾರಾರಿಗೆಂಬದು ಅವರವರಿಗೆ ಕೊನೆಯ ಉತ್ತರ ಬರೆಯುವಾಗ ನಿಶ್ಚಿತವಾಗಿ ತಿಳಿಸಲ್ಪಡುತ್ತದೆ.

೬. ಯಾವುದೇ ತರಹದ ಒಳಹೊರಗಣ ಜನರ ಭೆಟ್ಟಿ ಪತ್ರವ್ಯವಹಾರಗಳಿಗೆ ಆಸ್ಪದವಿಟ್ಟುಕೊಳ್ಳಕೂಡದು. ೩ ತಿಂಗಳಿನ ಮುದ್ದತೀ (Temporary) ಸನ್ಯಾಸವಿದೆಂದೇ ತಿಳಿದು ನಿಶ್ಚಿಂತನಾಗಿರಬೇಕು.

೭. ಸಾಧನೆ, ಜಪ, ಉಪಾಸನೆಗಳಲ್ಲಿ ಇಂತಹದೇ ಆಗಬೇಕೆಂಬ ಆತುರ ಕೇಳಲಿಕ್ಕಿಲ್ಲ. ನಿಮ್ಮ ವಿಚಾರ ಕೇಳಿಕೊಂಡು ನಂತರ ವಿಧಿಸಿದ್ದನ್ನು ನಿರಾಗ್ರಹದಿಂದ ನಡಿಸಿಕೊಂಡಿರುವ ತಯಾರಿ ಇರಬೇಕು.

೮. ತಪ್ಪುತಡೆಗಳಿಗೆ ವಿಧಿಸುವ ಹೆಚ್ಚಿನ ಉಪಾಸನೆಯ ಪ್ರಾಯಶ್ಚಿತ್ತವನ್ನು ಸಂತೋಷದಿಂದ ಸ್ವೀಕರಿಸಬೇಕು. ( ಉದಾ: ತಪ್ಪಿ ಮಾತಾಡಿದರೆ ಹತ್ತುಸಾವಿರ ದಿನದಕಿಂತ ಹೆಚ್ಚಿಗೆ ಜಪಮಾಡುವುದು. )

೯. ಯಾವ ಕಾರಣದಿಂದಲೂ ೩ ತಿಂಗಳವರೆಗೆ ಸ್ಥಳಾಂತರದ ಚಾಂಚಲ್ಯ ಉತ್ಪನ್ನವಾಗದಷ್ಟು ಗಟ್ಟಿಮನಸ್ಸು ಮಾಡಿಕೊಂಡಿರಬೇಕು. ಅಷ್ಟರಮಟ್ಟಿಗೆ ಹಿಂದುಮುಂದಿನ ವ್ಯವಹಾರಗಳ ಸಂಬಂಧವೇ ಕಡಿದಿರಬೇಕು.

೧೦. ತ್ರಿಕರಣಪೂರ್ವಕ ಸರಳತನ, ನಿರಭಿಮಾನತನ ಇಟ್ಟುಕೊಂಡು ಸಮಯಾನುಸಾರ ಸ್ವಂತದ ಕೆಲಸಗಳಲ್ಲದೆ ಆಲಸ್ಯ ಬಿಟ್ಟು ಸಹಾಭ್ಯಾಸಿಗಳಿಗೂ ನೆರವಾಗುತ್ತ ನಿತ್ಯನೈಮಿತ್ತಿಕ ಕಾರ್ಯಕ್ರಮಗಳಲ್ಲಿ ತಪ್ಪದೇ ಭಾಗವಹಿಸಬೇಕು.

ಪ್ರಕೃತಿಯ ಅಸ್ವಾಸ್ಥ್ಯದ ಪ್ರಸಂಗದಲ್ಲಿ ಮೇಲಿನ ನಿಯಮಗಳಲ್ಲಿ ಬದಲಾವಣೆ ಮಾಡಲ್ಪಡುತ್ತದೆ. ಸತ್ಯಸಂಕಲ್ಪಗಳನ್ನೆಲ್ಲಾ ಸರ್ವಸಾಕ್ಷಿ ಪೂರೈಸಿಕೊಡುತ್ತಾನೆಂಬಲ್ಲಿ ಸಂಶಯ ಬೇಡ.

## ತ್ರೈಮಾಸಿಕ ಪರಮಾರ್ಥ ಸಾಧನೆಯಲ್ಲಿ ಸಮ್ಮಿಳಿತರಾಗುವ ಸಾಧಕರಿಗೆ ಸೂಚನೆ

ಪೂರಾ ಮೂರು ತಿಂಗಳು ಉಳಿದುಕೊಂಡು ಸಾಧನ ಮಾಡಲೇಬೇಕೆಂದು ನಿಶ್ಚೈಸುವ ಸಾಧಕರು ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆದು ಕಳಿಸಬೇಕು.

೧. ತಮಗೆ ಪರಮಾರ್ಥದ ಅವಶ್ಯಕತೆ ಕಂಡಿದೆಯೇನು? ಕಂಡಿದ್ದರೆ ಯಾಕೆ? ಎಂದಿನಿಂದ?

೨. ವೈದಿಕ ತತ್ತ್ವಜ್ಞಾನ, ನಾಮಸ್ಮರಣಾದಿ ಉಪಾಸನೆಗಳಲ್ಲಿ ವಿಶ್ವಾಸ ಇದೆಯೇ?

೩. ಶಿಕ್ಷಣವೆಷ್ಟಾಗಿದೆ? ವೈದಿಕ, ಲೌಕಿಕ ಕೂಡ.

೪. ಈ ಮೊದಲು ಯಾವದಾದರೂ ಸಾಂಪ್ರದಾಯಕ್ಕೆ ಸೇರಿ ಅಥವಾ ಸ್ವತಂತ್ರವಾಗಿ ಏನಾದರೂ ಸಾಧನ ಮಾಡುತ್ತಿದ್ದೀರಾ?

೫. ಸದ್ಯದ ದೈಹಿಕ ಮಾನಸಿಕ ಸ್ಥಿತಿಗತಿಗಳ ಮೇಲಿಂದ ತಮಗೆ ಆಹಾರ ಅಭ್ಯಾಸಾದಿಗಳಲ್ಲಿಯ ಕಷ್ಟಸಹನಮಾಡುವ ಉತ್ಸಾಹವಿದೆಯೇ?

೬. ತಮ್ಮ ಉದ್ಯೋಗವಾವುದು? ಮನೆತನದ ವ್ಯವಸಾಯವೇನಿತ್ತು?
೭. ಶಾರೀರಿಕ ರೋಗವೇನೂ ಇಲ್ಲವಲ್ಲವೆ? ಇದ್ದರೆ ಆನುವಂಶಿಕವ್ರೋ? ಆಗಂತುಕವ್ರೋ?
೮. ಜಾತಿ ಯಾವುದು? ವಯಸ್ಸೆಷ್ಟು? ಗೃಹಸ್ಥರಾಗಿದ್ದೀರೋ?
೯. ಇಲ್ಲಿ ಪ್ರತಿತಿಂಗಳು ನಿಮ್ಮ ಮಟ್ಟಿಗೆ ೧೫ ರೂ. ಖರ್ಚು ಮಾಡಿ ಕೊಂಡಿರುವ ತ್ರಾಣವಿದೆಯೋ? ಅಲ್ಪಸ್ವಲ್ಪ ಅಥವಾ ಪೂರಾ ಖರ್ಚಿನ ಭಾರ ನಮ್ಮ ಮೇಲೆಯೇ ಹಾಕಬಯಸುತ್ತೀರಾ?
೧೦. ಸ್ವಭಾವ ಬಲುಹರಟೆ, ಶಿಟ್ಟಿನದಾಗಿರಲಿಕ್ಕಿಲ್ಲ? ಇದ್ದರೂ ನಿಗ್ರಹ ಮಾಡಿಕೊಳ್ಳಬಲ್ಲಿರಲ್ಲವೇ?

ಈ ಪ್ರಶ್ನೆಗಳಿಗೆಲ್ಲಾ ತಮ್ಮಿಂದ ಉತ್ತರ ಬಂದೊಡನೆ ಇಲ್ಲಿಂದ ಪ್ರತಿಯಾಗಿ ನಮ್ಮ ಅಭಿಪ್ರಾಯ ತಿಳಿಸಲಾಗುತ್ತದೆ. ಪತ್ರವ್ಯವಹಾರ ಬಲುಬೇಗ ಮಾಡಬೇಕು. ಕಾರ್ತಿಕ ಶುದ್ಧ ಪ್ರತಿಪದೆಯ ನಂತರ ಈ ವಿಷಯದ ಪತ್ರವ್ಯವಹಾರ ಗಮನಿಸಲಾಗುವುದಿಲ್ಲ. ನಮ್ಮಿಂದ ನಿಶ್ಚಿತ ವಾದ ಕರೆಯ ಪತ್ರ ಬರುವ ಮೊದಲೆ ಯಾರೂ ಇಲ್ಲಿಗೆ ಬರುವ ತ್ರಾಸ ತಕ್ಕೊಳ್ಳಬಾರದು.

೧ ಆಣೆ ಪೋಸ್ಟಲ್ ಸ್ಟಾಂಪ ಇಡುವುದರಿಂದ ಪತ್ರಗಳಿಗೆ ತಪ್ಪದೆ ಉತ್ತರ ದೊರೆಯುತ್ತದೆ.

ವಿಳಾಸ :—ದತ್ತಮೂರ್ತಿ, ಅಖಂಡಾಶ್ರಮ ಬಾಡಮಠ,
ಕಾರವಾರ. ಪೋಸ್ಟ. ಬಾಡ (ಉತ್ತರ ಕನ್ನಡ).

## ದತ್ತಭಕ್ತರಲ್ಲಿ ಬಿನ್ನಹ

ಶ್ರೀದತ್ತ ಭಕ್ತರೆಲ್ಲ ಈ ವರುಷದ ಗುರುಪ್ರತಿಪದೆಗೆ ವಿಶೇಷ ಸಮಾರಂಭ ನಡೆ ಯಿಸಬೇಕು. ಶ್ರೀಗುರುಚರಿತ್ರ ಸಪ್ತಾಹ ಪಾರಾಯಣ, ದಿಗಂಬರ ನಾಮಭಜನ ಸಪ್ತಾಹ, ಅಖಂಡಜಪ, ಕೀರ್ತನ, ಪ್ರವಚನ, ಸಂತರ್ಪಣಾದಿಗಳನ್ನು ಯೋಗ್ಯತೆಗೆ ತಕ್ಕಂತೆ ಭಕ್ತಿ ಶ್ರದ್ಧೆಗಳಿಂದ ಆಚರಿಸಬೇಕು. ಶ್ರೀದತ್ತನಾಮ ದುಂದುಭಿ ಸಾರ್ವತ್ರಿಕ ವಾಗಿ ಮೊಳಗಲಿ! ಸರ್ವರೂ ಸುಖಿಗಳಾಗಲಿ!

ಶ್ರೀಗುರುದೇವದತ್ತ! ಶ್ರೀಗುರುದೇವದತ್ತ!! ಶ್ರೀಗುರುದೇವದತ್ತ!!!

ಓಂ ಕೇವಲ!

ಶ್ರೀಗುರುಬಂಧು ಸ. ಸ್ವ. ಯೋಗೀಶ್ವರ ದತ್ತಮೂರ್ತಿಯವರು ತಾ. ೧೨-೧೦-೩೮ನೆಯ ದಿವಸ ಸಪರಿವಾರವಾಗಿ ಹೊರಟು ಅಂಕೋಲೆಯಲ್ಲಿ ೧ ದಿನ ತಂಗಿ ೧೪ನೆಯ ಶುಕ್ರವಾರ ಶ್ರೀಮಠದ ಅಖಂಡಾಶ್ರಮದಲ್ಲಿ ಬಂದು ನಿಂತರು. ಶ್ರೀಗುರುದ್ವಾದಶಿಯ ಉತ್ಸವಾನಂತರ ಕ್ಯಾಂಪಿನ ವ್ಯವಸ್ಥೆಗೆ ಮೊದಲಾಯಿತು.

ಅಖಂಡಾಶ್ರಮದ ಎಡಬದಿಗೆ ಶ್ರೀಗಳ ಛಾಪಖಾನೆ ಇದ್ದಲ್ಲಿ—ಸಾಧಕರಿಗಾಗಿ ಪರ್ಣಕುಟೀರ ನಿರ್ಮಾಣದ ಮುಹೂರ್ತ ತಾ. ೨೪-೧೦--೩೮ನೆಯ ಸೋಮವಾರ ಮಧ್ಯಾಹ್ನಕ್ಕೆ ಮಾಡಲ್ಪಟ್ಟಿತು. ೩೩ × ೨೪ ಫೂಟು ಪ್ರಮಾಣದ ಡವಗಿ ಮತ್ತು ಹೆಣೆದ ಟೆಂಗಿನ ಗರಿಗಳ (ಮಡ್ಲಿನ) ಹೊದಿಕೆಯ ಹಂದರದಲ್ಲಿ ನಡುವೆ ೮ ಫೂಟು ಸ್ಥಳ ಇಟ್ಟು ಎದುರುಬದುರಾಗಿ ೧೨ ಕೋಣೆಗಳ ರಚನೆಯಾಗಿತ್ತು. ಎಲ್ಲೆಡೆಗೂ ಮಡ್ಲಿನ ಸಡಗರವೇ ಸಡಗರ! ಇದು ಸಾಧಕರಿದ್ದ ಪರ್ಣಕುಟೀರ; ಯಥಾರ್ಥ ಪರ್ಣಕುಟೀರವಾಗಿತ್ತು. ವಸತಿ, ಪ್ರವಚನ, ಸಾಧನ, ಅಭ್ಯಾಸಗಳೆಲ್ಲಾ ನಡೆದದ್ದು ಇಲ್ಲಿಯೇ.

ಮೂರು ತಿಂಗಳು ಅಹೋರಾತ್ರ ಅಖಂಡ ಭಜನಕ್ಕೆ ಮುಕ್ತಿಮಂದಿರವನ್ನೇ ಒಳಗೊಂಡ ದೊಡ್ಡ ಮಂಟಪ ಹಾಕಿ ಅಲ್ಲಿಯೇ ಭಜನದ ಏರ್ಪಾಟು ಮಾಡಿತ್ತು. ಶ್ರೀಮಠದ ಪೂರ್ವ ಆವಾರಕ್ಕೆ ಹೊಂದಿ ಹೊರಗೆ ಈ ಸ್ಥಳ ಇದೆ. ಶ್ರೀಮತ್ ಅನಿರುದ್ಧ ತೀರ್ಥರ ಸ್ಮಾರಕ, ಶ್ರೀ ನಾರಾಯಣತೀರ್ಥ ಮತ್ತು ಶ್ರೀ ಮಧುಸೂದನಾಶ್ರಮರ ಸಮಾಧಿಗಳಿರುವ ಸಣ್ಣ ಗುಡಿಯೇ ಈ ಪವಿತ್ರ ಮುಕ್ತಿಮಂದಿರ.

ಕಾರ್ತಿಕ ಪೌರ್ಣಿಮೆಯ ಗ್ರಹಣಕ್ಕೇ ಸ್ವ-ಪರಸ್ಥಳಗಳ ಸಾಧಕರು ಕೂಡಿದರು. ಮರುದಿನ ಮಂಗಳವಾರ (ತಾ. ೮-೧೧-೩೮) ಬೆಳಗಿನ ಸ್ನಾನಾನಂತರ ೮ ಗಂಟೆಗೆ ಸಾಧಕರೂ ಇತರರೂ ಮುಕ್ತಿಮಂದಿರದ ಮುಂದೆ ನೆರೆದರು. ಶ್ರೀಮಠದ ಎಣ್ಣೆ ಬತ್ತಿಯ ನಂದಾದೀಪ ತಂದಿಟ್ಟಿತ್ತು. ಶ್ರೀಸಮಾಧಿಯ ಪುಷ್ಪಪ್ರಸಾದವನ್ನೂ ತಂದು ಮುಕ್ತಿಮಂದಿರದಲ್ಲಿ ಶ್ರೀಸಾನ್ನಿಧ್ಯದ ಆವಾಹನ ಮಾಡಿಕೊಂಡರು. ಶ್ರೀ ಮಠದ ಅರ್ಚಕ

ಗುರುಬಂಧು ವೇ. ದತ್ತಾತ್ರೇಯ ಶಂಕರ ಜ್ಯೋತಿಷಿಯವರಿಂದಲೇ

॥ ದತ್ತಾತ್ರಯಾ ಶ್ರೀಪಾದರಾಯಾ । ನರಸಿಂಹ ಸರಸ್ವತಿ ಯತಿರಾಯಾ ॥

ಎಂಬ ನಾಮಭಜನೆ ಅಖಂಡ ತ್ರೈಮಾಸಿಕ ಸಂಕಲ್ಪಪೂರ್ವಕವಾಗಿ ಆರಂಭಿಸಲ್ಪಟ್ಟಿತು. ಆ ಕ್ಷಣಕ್ಕೆ ಸುರುವಾದ ಸೊಲ್ಲು ಸ್ವಲ್ಪಮಾತ್ರ ತಡೆಯಿಲ್ಲದೆ ಮೂರು ತಿಂಗಳೂ ಅಖಂಡ ಪ್ರತಿಧ್ವನಿ ಕೊಡುತಿತ್ತು. ಈ ಭಜನೆಯ ಪಾಳಿಯಲ್ಲಿ ಸಾಧಕರೂ ತಪ್ಪದೆ ಸೇರಬೇಕಾಗುತ್ತಿತ್ತು. ಮಧ್ಯಾಹ್ನದ ೩ ಘಂಟೆಯಿಂದ ೫ರ ವರೆಗೆ ಹೆಣ್ಣುಮಕ್ಕಳದೂ ಒಂದು ಪಾಳಿ ಇತ್ತು.

ಆ ಮೇಲೆ ಸಾಧಕರೊಡನೆ ಶ್ರೀದತ್ತಮೂರ್ತಿಯವರು ಯೋಗಾಶ್ರಮ ತಲುಪಿದಾಗ ೯॥ ಯಾಗಿತ್ತು. ಪರ್ಣಕುಟೀರ ಮಳೆಯ ಮೂಲಕ ಮುಗಿದಿರಲಿಲ್ಲವೆಂದು ಮೊದಲಿನ ೧೫ ದಿನ ಸಾಧಕರು ಶ್ರೀಮಂಠದ ಯೋಗಾಶ್ರಮವೆಂಬ ಕಟ್ಟಡದಲ್ಲಿ ಉಳಿದುಕೊಂಡಿದ್ದರು. ಇಲ್ಲಿಯೇ ಸಾಧನದ ಉಪಕ್ರಮವಾಯಿತು. -ಈ ಕಾರ್ಯಕ್ರಮ ನೋಡಲಿಕ್ಕೆಂದೇ ಬಂದಿದ್ದ ಮಾನ್ಯ ಗುರುಬಂಧು ವೇ. ಪುತ್ತು ಅನಂತ ಭಟ್ಟರು (ಅನಂತಾನಂದ) ಅರ್ಚಕ ಶ್ರೀಪಾದುಕಾಮಠ ಹಾಳಿತಕಟ್ಟೆ, ಶಿದ್ದಾಪುರ ಇವರಿಂದ ಪರಮಾರ್ಥ ಸಾಧನದ ಈ ಮೊದಲನೆಯ ಬೀಡಿನ ಉದ್ಘಾಟನೆ ಮಾಡಿಸಿದರು. ಅವರು ಸಾಧಕರಿಗೆ ಉತ್ಸಾಹ ಬರುವಂತೆ ಆಶೀರ್ವಾದ ಪೂರ್ವಕ ಉಪದೇಶ ಮಾಡಿದರು. ಮರುದಿನದಿಂದ ಕುಟೀ ಪ್ರವೇಶದ ಪರ್ಯಂತರ ಬೆಳಗಿನ ಪ್ರಾರ್ಥನೆ, ಪ್ರವಚನ ಮೊದಲಾದವು ಅಖಂಡಾಶ್ರಮದ ಕಟ್ಟೆಯ ಮೇಲೆ ಸಾಗಿದವು. ಸಾಧಕರು ಪರ್ಣಕುಟೀ ಪ್ರವೇಶ ಮಾಡಿದ್ದು ತಾ. ೨೨ನೆಯ ಮಂಗಳವಾರ.

ಮೊದಲಿನ ವಾರ ಭಜನೀ ಪಾಳಿಯವರ ಸತ್ವಪರೀಕ್ಷೆಯೇ ಆಗಿ ಹೋಯಿತು. ಹೊರಗೆ ತುಸು ಹೊತ್ತು ಮಳೆ ನಿಂತರೂ ಒಳಗಿನವರಿಗೆ ಛಪ್ಪರದ ನೀರಹನಿ ತಟಗುಟ್ಟುವದು ತಪ್ಪಲಿಲ್ಲ. ಮೇಲೆ ನೀರು, ಕೆಳಗೆ ಹಸಿ, ಸುತ್ತಲೂ ಬೀಸುವ ತಂಗಾಳಿ, ಇಂಥದರಲ್ಲಿಯೂ ಪಾಳೀ ತಪ್ಪಿಸದೇ ಪ್ರೀತಿಯಿಂದ ಧೈರ್ಯವಾಗಿ ಭಜನೆ ಮಾಡಿದ ಕ್ಷತ್ರಿಯಕುಮಾರಪಂತ,

ಭಂಡಾರೀ ಭಜಕವರ್ಗದವರು ನಿಜವಾಗಿ ಶ್ರೇಯೋಭಾಗಿಗಳು. ಬಡವರು! ಹಗಲೆಲ್ಲಾ ಹೊಟ್ಟೆಗಾಗಿ ಕಷ್ಟಪಡಬೇಕು, ಅಪರಾತ್ರಿಯಲ್ಲಿ ಅಡವಿಯಂಥಲ್ಲಿ ಭಜನೆಗೆ ನಿದ್ದೆಗೆಟ್ಟು ನಿಲ್ಲಬೇಕು. ಅದೂ ಒಂದೆರಡು ದಿನಗಳ ಮಾತಲ್ಲ, ಪೂರಾ ಮೂರು ತಿಂಗಳು. ಮೇಲಾಗಿ ನಮ್ಮ ಸಂಪ್ರದಾಯದ ಉಪಾಸನೆಗಳೇನು ಚಹಾ, ಉಪ್ಪಿಟ್ಟು, ಊಟಗಳ ಆಸರ ವನ್ನಾದರೂ ಕೊಡುವಂಥವೇ? ಊಂ ಹುಂ. ಕಷ್ಟ, ಅಡಚಣಿ ನೋಡಿ ಉಪಾಸನೆ ಮಾಡಬೇಕೆಂಬದು ಮಹಾರಾಜರ ದಂಡಕ. ಇಷ್ಟಾಗಿಯೂ ಭಜನೇ ಪಾಳಿಗೆಂದು ಯಾರಿಗೂ ಖುದ್ದಾಗಿ ನಿಮಂತ್ರಣ ಕೊಟ್ಟಿದ್ದಿಲ್ಲ ಎಂಬದು ಲಕ್ಷ್ಯದಲ್ಲಿಡತಕ್ಕ ಮಾತು.

ಮೊದಲಿನ ಮೂರುದಿನ, ವೇ. ಪುತ್ತೂರುಭಟ್ಟರಿಂದಲೇ ಪ್ರವಚನ ನಡೆಯಿತು. ವಿಷಯ "ಮೋಕ್ಷದ ಕಲ್ಪನೆ" ಆ ಮೇಲೆ (ತಾರೀಖು ೧೪-೧೧-೩೯ನೆಯ ದಿನ) ಶ್ರೀಮಠದ ಅಧ್ಯಕ್ಷರಾಗಿದ್ದ ಶ್ರೀಗುರುಬಂಧು ದೇಶಪಾಂಡೆ ನೀಲಕಂಠರಾಯರಿಂದ ಸಾಧಕರೆದುರಿಗೆ "ಅಹಂವೃತ್ತಿಯ ಪರಿಚಯ" ಎಂಬ ವಿಷಯದಲ್ಲಿ ಉಪನ್ಯಾಸ ಮಾಡಿಸಿತು. ಅದರಲ್ಲಿ ನಿರ್ವಿಕಲ್ಪ ಸಮಾಧಿ, ಲಯಚಿಂತನೆ ಮುಂತಾದ ಸಾಧನೆಗಳ ಚರ್ಚೆ ಚನ್ನಾಗಿತ್ತು.

ಹೀಗೆ ಒಂದೂವರೆ ತಿಂಗಳಾಗುವಷ್ಟರಲ್ಲಿ ಸಾಧಕರೂ, ಅವರೊಡನೆ ಒಬ್ಬರೇ ಗುದ್ದಾಡಿ ದೀಕ್ಷಿತರೂ ದಣಿದಂತಾಗಿದ್ದರು. ಅದೇ ಸಮಯಕ್ಕೆ ತಾ. ೨೪-೧೨-೩೮ನೆಯ ದಿವಸ ಬೈಲಹೊಂಗಲದಿಂದ ಶ್ರೀ. ಕುಲಕರಣಿ ನಾರಾಯಣರಾಯರು, ಎಂ. ಏ., ಎಲ್‌ಎಲ್. ಬಿ. ವಕೀಲ ಇವರು ಬಂದರು. ಅವರು ಬಂದಾಗ ಸಾಯಂಕಾಲ; ಭಾಗವತ ದಶಮಸ್ಕಂಧ ಪೂರ್ವಾರ್ಧ ಪ್ರವಚನ ನಡೆದಿತ್ತು. ಮರುದಿನ ಬೆಳಿಗ್ಗೆ ಪ್ರವಚನ, ಸಾಧನಾಭ್ಯಾಸಗಳ ಪ್ರಾತ್ಯಕ್ಷಿಕೆಗಳನ್ನು ಕಣ್ಣಾರೆ ನೋಡಿ, "ಏನು ಸಾಧನ ಮಾಡಿಸುವರೋ ಎಂದಿದ್ದೆ, ಇದೇ ಮಾರ್ಗದಿಂದಲೇ ಅಧ್ಯಾತ್ಮ ಸುಲಭಸಾಧ್ಯ, ಇದು ಸಾಕ್ಷಾತ್ಕಾರದ ಶಾರ್ಟಕಟ್, ಕೇನೋಪ ನಿಷತ್ತಿನಲ್ಲಿ ವರ್ಣಿತವಾಗಿದೆ" ಎಂದು ಉದ್ಗಾರ ತೆಗೆದರು. ಉಳಿದೆಲ್ಲ

ವ್ಯವಸ್ಥೆಗಳಿಗೂ ಸಂತೋಷಪಟ್ಟರು. ಕೆಲವು ವಿಷಯಗಳ ಚರ್ಚೆ ನಡೆದು ಮೂರು ದಿನ ಸಾಧಕರೆದುರು ಕೇನೋಪನಿಷತ್ತಿನ ಮೇಲೆ ಎರಡೂ ವೇಳೆ ವಕೀಲರ ಪ್ರವಚನ ನಿಶ್ಚಿತವಾಯಿತು.

ಹೊತ್ತಿಗೆ ೨॥ ತಾಸಿನಂತೆ ಮೂರು ದಿವಸ ಆರು ಪ್ರವಚನಗಳು ಆದವು. ಜ್ಞಾನದ ಅದ್ಭುತ ಮಳೆಯನ್ನೇ ಸುರಿಸಿಬಿಟ್ಟ ಮಹಾರಾಯ! ಎಲ್ಲರ ಬಾಯಲ್ಲೂ "ಪ್ರತಿಬೋಧ ವಿದಿತಂ ಮತಂ ಅಮೃತತ್ವಂ ಹಿ ವಿಂದತೇ" ಎಂಬ ಕೇನೋಪನಿಷತ್ತಿನ ಸಾಧನವಾಕ್ಯ ನೆಲಸಿಹೋಯಿತು. ಇವೇ ಆರು ಉಪನ್ಯಾಸಗಳನ್ನು "ವೇದಾಂತದ ಒಳದಾರಿ" ಎಂದು ಇದರೊಂದಿಗೆ ಪ್ರಸಿದ್ಧಿಸಿದ್ದೇವೆ.

ಈ ಕಾರ್ಯಕ್ರಮದಿಂದ ಸಾಧಕರು ಹುರಿದುಂಬಿದರು. ರಾಯರು ಇನ್ನು ನಾಳೆ ಹೊರಡಬೇಕೆಂಬಷ್ಟರಲ್ಲಿ ಹುಬ್ಬಳ್ಳಿಯಿಂದ ಗುರು ಬಂಧು ಸ. ಪ. ಅಸುಂಡಿ ಸ್ವಾಮಿರಾಯರು ಶ್ರೀ. ಗು. ಭ. ವಾಳವೇಕರ ಅಣ್ಣಾ ರಾಯರೊಡನೆ ತಾ. ೩೦-೧೨-೩೮ರ ಪತ್ರದಂತೆ ಬಂದೇ ಬಿಟ್ಟರು. ಇವರಿಗಾಗಿ ನಾ ರಾ ಯ ಣ ರಾ ಯ ರೂ ನಿಂತರು. ನಮಗೆಲ್ಲ ಸುಗ್ಗಿ ಯಾಯಿತು. ಸಾಧಕರಿಗೆ ಕೊಡಲ್ಪಡುವ ಶಿಕ್ಷಣದ ರೀತಿ, ಅಭ್ಯಾಸದ ಪದ್ಧತಿ, ವ್ಯವಸ್ಥೆಗಳನ್ನೆಲ್ಲ ವಿಮರ್ಶೆ ಮಾಡಿಕೊಂಡರು. ತಾವೂ ಸ್ವಲ್ಪ ಕಲಿಸಲು ಪ್ರಯತ್ನಮಾಡಿ ನೋಡಿದರು. ತಾವು ಬರುವ ಮುಂಚೆ ತಾ. ೨೭-೧೨-೩೮ಕ್ಕೆ ಬರೆದ ಅಸುಂಡಿಯವರ ಪತ್ರದ ವೈಖರಿ ಇದು ನೋಡಿ:—

ಕೃತಾನೇಕ ಶಿ. ಸಾ. ನ. ತರುವಾಯ ತಮ್ಮ ಕಾರ್ಡು ತಲ್ಪಿತು. ನಾವು ಇಬ್ಬರೂ ಶುಕ್ರವಾರ ಸಂಜೆಗೆ ಅಲ್ಲಿಗೆ ಬರಬೇಕೆಂತಾ ಸಂಕಲ್ಪ ಮಾಡಿದ್ದೇವೆ. ಸಂಕಲ್ಪ ಪೂರ್ಣ ಮಾಡುವದು (ಪರಮಾರ್ಥದ ತಪ್ಪು ತಿಳುವಳಿಕೆಯ ಪ್ರಕಾರ) ಶ್ರೀಹರಿಯ ಇಚ್ಛೆ.

ವಿಚಿತ್ರ ಕಲ್ಪನೆಯು ವ್ಯವಹಾರದಲ್ಲಿರುವವರಿಗೆ ಇದ್ದಂತೆ ಪರಮಾರ್ಥ ದಲ್ಲಿರುವವರಿಗೂ ಇದೆ. ಯಾಕಂದರೆ, ಕಲ್ಪನೆಯೇ ನೈಸರ್ಗಿಕವಾಗಿ ವಿಚಿತ್ರವದೆ. ವಿಚಿತ್ರತೆಯಲ್ಲಿ ಸಹಜಸ್ಥಿತಿಯನ್ನು ಅನುಭವಿಸುವದೇ (ಅವೈಚಿತ್ರ್ಯವೇ) ನಿಜವು. 'ಪರಮಾರ್ಥ', 'ವ್ಯವಹಾರ' ಶಬ್ದಾತೀತವು.

ಮಿ. ನಾರಾಯಣರಾಯರಿಗೂ ತಮಗೂ ಮತ್ತು (ನಿಯಮಿತ ಕಲ್ಪನೆ ಯಿಂದ ಪರಿಮಿತಿಸಲ್ಪಟ್ಟ) ಮಹಾನುಭಾವರಾದ ಶ್ರೀಪದ್ಮನಾಭ ಗುರು ಗಳಿಗೂ ಅನಂತಾನಂತ ವಂದನೆಗಳು.

ತಮ್ಮ,
ಸ್ವಾಮಿರಾವ.
ಅಣ್ಣಾರಾವ.

ಅವೈಚಿತ್ರ್ಯ (ಅಕೃತ್ರಿಮ - ಬ್ರಹ್ಮ) ಕ್ಕೆ ತೆಕ್ಕಿಹಾಕಿದ ಕಲ್ಪನೆಗಳ ನೈಸರ್ಗಿಕ ವೈಚಿತ್ರ್ಯವೂ ಸಮಾಧಾನ ಸಾಧಕವೆಂದಿಷ್ಟುನಾವು ಅಸುಂಡೀ ರಾಯರ ಪತ್ರಕ್ಕೆ ಉತ್ತರವೆಂದು ಹೇಳಬಹುದು.

ಸ್ವಾಮಿರಾಯರ ೪೦ ತಾಸುಗಳ ಮುಕ್ಕಾಮು ವಾತಾವರಣ ವನ್ನೆಲ್ಲ ಸ್ಫುರಣಮಯ ಮಾಡಿಬಿಟ್ಟಿತು. ಸತತ ಆದೇ! ಸಾಧಕರೆಲ್ಲ ಮೈದುಂಬಿ ಹೋದರು. ನಿಜವಾಗಿ ಅಸುಂಡಿಯವರ ಅಧ್ಯಾತ್ಮಪ್ರೇಮ ಅಲೌಕಿಕ. ಇವರಂತೆ ವ್ಯವಹಾರದಲ್ಲಿ ವೇದಾಂತವನ್ನು ಸುರಿಸಿದ ಸರಳ ಜೀವಿಗಳು ಬಹು ವಿರಳ.

ಅಂತೂ ಕಾರವಾರದಲ್ಲಿಯ ಸಾಂಪ್ರದಾಯಿಕರಲ್ಲಿ ಮಲೆತ ವೇದಾಂತ ವಿಚಾರಗಳನ್ನೆಲ್ಲ ನಾರಾಯಣರಾಯರು ಕಲಕಿದರೆ, ಅಸುಂಡಿ ಯವರು ಅವನ್ನೆಲ್ಲ ಪ್ರವಾಹವಾಗಿಸಿದರು. ದತ್ತಮೂರ್ತಿಯವರು ಅವು ಗಳಿಗೆಲ್ಲ ಒಡ್ಡುಹಾಕಿ ಬೇಕಿದ್ದಲ್ಲಿ ಬೇಕಾದಷ್ಟನ್ನೇ ಈ ಸಾಧನೋದ್ಯಾನ ದಲ್ಲಿ ಬಳಿಸಿ, ಹಾಯಿಸಿ ಸಾಧಕರಿಗೆ ಅನುಭವದ ಸವಿಯಾದ ಫಲಗಳನ್ನು ಒದಗಿಸುತ್ತಿದ್ದಾರೆ. ಇದೆಲ್ಲ ಶ್ರೀಪದ್ಮನಾಭನ ಯೋಜನೆ, ಶ್ರೀಶಿವಾನಂದರ ಕರುಣಾವೈಭವ!

ಈ ರೀತಿ ಸಮ್ಮೇ ಪರಿಶೀಲಕ ಪರಮಾರ್ಥದ ಬಳಗ ಮಮತೆಯಿಂದ ಸಹಾಯ ಮಾಡಿ ತಾ. ೧-೧-೩೬ ನೆಯ ಮಧ್ಯಾಹ್ನ ಗೋಕರ್ಣ ಕ್ಷೇತ್ರ ಮಾರ್ಗವಾಗಿ ತಂತಮ್ಮ ಊರುಗಳಿಗೆ ತೆರಳಿತು.

ಈ ಬೀಡಿ (Camp) ಸಲ್ಲಿ ಹದಿಮೂರು ಜನ ಸಾಧಕರ ಸಂಬಂಧ ಬಂದಿದೆ. ಅವರಲ್ಲಿ ಆಶ್ರಮವಾಸಿಗಳು ೮ ಜನರು, ಹೊರಗಿನವರು ೫

ಜನರು. ಒಳಗಿನವರಲ್ಲಿ ೧॥ ತಿಂಗಳ ಮೇಲೆ ಒಬ್ಬರನ್ನು ತೆಗೆದುಹಾಕಿತು, ಮತ್ತೊಬ್ಬರನ್ನು ಪ್ರಕೃತಿಯ ಅಸ್ವಾಸ್ಥ್ಯ ಮೂಲಕ ವಜಾ ಮಾಡಲಾಯಿತು. ಆಶ್ರಮವಾಸಿಗಳಲ್ಲಿ ಒಬ್ಬರು ಹೆಣ್ಣುಮಕ್ಕಳೂ ಇದ್ದರು. ಬೆಳಗಿನ ಅಭ್ಯಾಸದ ಪ್ರವಚನಕ್ಕೆ ಒಳಗಿನ ಸಾಧಕರ ವಿನಾ ಬೇರೆಯವರಿಗೆ ಪರ್ಣಕುಟಿಯಲ್ಲಿ ಪ್ರವೇಶವಿದ್ದಿಲ್ಲ. ಹೊರಗಿನ ಐವರಲ್ಲಿ ಆಶ್ರಮದ ನಿಯಮಗಳಂತೆಯೇ ಮನೆಯಲ್ಲಿದ್ದುಕೊಂಡು, ನಿತ್ಯ ತಪ್ಪದೇ ಅಭ್ಯಾಸಕ್ಕೆ ಬರಲೊಪ್ಪಿದ ಇಬ್ಬರಿಗೆ ಮಾತ್ರ ಪ್ರವೇಶವಿತ್ತು. ಮಂಟಪದ ಹೊರಗೇ ಕುಳಿತು ಇತರ ಅನೇಕರೂ ಕೇಳುತ್ತಿದ್ದರು. ಸಾಯಂಕಾಲದ ಪ್ರವಚನ ಮುಕ್ತದ್ವಾರ. ಸಾಧಕರಲ್ಲಿ, ಪರಮಾರ್ಥದ ಕಲ್ಪನೆಕೂಡ ಇಲ್ಲದವರು ಕೆಲವರಿದ್ದರೆ; ಅರ್ಧ ಆಯುಷ್ಯವನ್ನೇ ಅಧ್ಯಾತ್ಮಸಾಧನಗಳಲ್ಲಿ ಸವೆಸಿದವರೂ ಹಲವರಿದ್ದೆವು. ನಮ್ಮಲ್ಲಿ ಒಬ್ಬರನ್ನು ಬಿಟ್ಟರೆ ಉಳಿದವರೆಲ್ಲ ದೀಕ್ಷಿತರಿಗಿಂತ ಬಹಳ ಹಿರಿಯರೇ (೭೦ರ ಮನೆ ಮುಟ್ಟಿದವರೂ) ಇದ್ದುದಕ್ಕೆ ಒಮ್ಮೊಮ್ಮೆ ಕ್ಯಾಂಪಿನಲ್ಲಿ 'ವೃದ್ಧಾಃ ಶಿಷ್ಯಾ ಗುರುರ್ಯುವಾ' ಎಂಬ ಉದ್ಗಾರ ಕೇಳಬರುತ್ತಿತ್ತು.

ಈ ಅವಧಿಯಲ್ಲಿ ಹೇಳಿದ ವಿಷಯ, ಸಾಧನ, ಶಿಕ್ಷಣಪದ್ಧತಿ, ರೀತಿನೀತಿಗಳೆಲ್ಲಾ ಅಪೂರ್ವಗಳೇ. ಯಾವ ಗ್ರಂಥಗಳಲ್ಲೂ ಕಂಡದ್ದಿಲ್ಲ. ಕೇಳಿದ್ದಿಲ್ಲ. ನಮಗೆ ಸಂಬಂಧಿಸಿದ ವ್ಯವಹಾರದಲ್ಲಿಯೇ ವೇದಾಂತ ದರ್ಶನ, ಎದುರಿನವೇ ಉದಾಹರಣ, ನಮ್ಮ ಗುಣಗಳಲ್ಲಿಯೇ ಪರೀಕ್ಷಣ. ಅಭ್ಯಾಸಕ್ಕೆಂದು ಎದುರಿಗೆ ಕುಳಿತರಂತೂ ಕೈಹಿಡಿದು ಕರೆದೊಯ್ದಷ್ಟು ಸುಲಭ ಪ್ರಗತಿ. ಹೀಗಾಗಿ ಹಲವು ಸಾರೆ ನಾವು ತಿಳಿದೂ ತಿಳಿಯದವರಂತೆ ಸ್ತಂಭಿತರಾಗುತ್ತಿದ್ದೆವು. ಪುಣ್ಯಮಯ ವಾತಾವರಣ, ಭವ್ಯವ್ಯಕ್ತಿತ್ವ ಪಕ್ವೃತ್ವಗಳು ಮನಸ್ಸಿನ ಅಡ್ಡ ದಾರಿಗಳನ್ನೆಲ್ಲ ಅಡ್ಡಗಟ್ಟಿಬಿಟ್ಟಿದ್ದವು. ಒಳ್ಳೇ ನಿಯಮಿತತನ, ಕಡಕ ವ್ಯವಸ್ಥೆಯ ಶಿಸ್ತು, ರಸತುಂಬಿದ ನೇತೃತ್ವಗಳು ಕಾರ್ಯಕ್ರಮಕ್ಕೊಳ್ಳೇ ಕಳೆ ಏರಿಸಿದ್ದವು. ಇಂತು ನಡೆದ ಪ್ರಯೋಗಗಳು ಕೊನೆಯ ತಿಂಗಳಲ್ಲಂತೂ ಬಲು ಸರಾಗವಾಗಿ ಸಾಗಹತ್ತಿ ಸಾಧಕರ ಡಾಯರಿಯ ಪಾನುಗಳು ಸಂತೋಷ ಸೂಸತೊಡಗಿದವು.

ಸಾಧಕರ ಪ್ರಗತಿಯ ದೃಷ್ಟಿಯಿಂದ ಕೆಳಗಿನ ನಾಲ್ಕು ಮಾತು ಹೇಳಲೇಬೇಕು. ಒಬ್ಬರು ಉಪಾಸ್ಯರೂಪವನ್ನು ಕಣ್ಣಾರೆ ಕಂಡು ಕುಣಿದರೆ, ಮತ್ತೊಬ್ಬರು ಸರಾಗವಾಗಿ ಸಾಕ್ಷಿಯಲ್ಲಿ ಸಮರಸರಾದರು, ಮತ್ತೊಬ್ಬರು ನಾಮಸ್ಮರಣೆಯಲ್ಲಿ ಪ್ರೇಮಪರವಶರಾಗಿ ಮೈಮರೆದರೆ, ಇನ್ನೊಬ್ಬರು ಪ್ರವಚನ ನಡೆದಾಗಲೇ ವೃತ್ತಿಗುಂಟೆ ತಾದಾತ್ಮ್ಯ ಹೊಂದಿ ಪ್ರಹರದಷ್ಟು ವೇಳೆ ಹೊರಗಿನ ಅರಿವಿಲ್ಲದೇ ಕುಳಿತರು. ಬೇರೊಬ್ಬರು ಅನುಸಂಧಾನದಲ್ಲಿ ಯಶಸ್ವಿಯಾಗಿ "ನಾನು ಜನ್ಮಮರಣ ರಹಿತನಾದೆ" ನೆಂದು ಗರ್ಜಿಸಿದರೆ, ಮತ್ತೊಬ್ಬರು ಎದುರೆದುರೇ ಧ್ಯಾನದಿಂದ ಪ್ರಾಣ ಸಹ ವೃತ್ತಿಯ ಲಯಮಾಡಿ ತೋರಿಸಿದರು. ಹೊರಗೆ ೨೫ ವರ್ಷ ದುಡಿದರೂ ಆಗದ್ದು ಈ ಮೂರು ತಿಂಗಳಲ್ಲೇನಾದೀತು? ಆದರೂ ಏನಾದರೂ ಆದರೆ ಆಗಲೆಂದು ಮಾಡುತ್ತೇವೆ. ಹೊರಬಿದ್ದ ಮೇಲೆ ನಮ್ಮ ಗುರುಗಳು ಇದನ್ನು ಹೌದೆಂದರೆ ನಾವೂ ಹೌದೆನ್ನುವವರೆಂದುಕೊಂಡಿದ್ದ ಶ್ರದ್ಧಾಳು(?)ಗಳ ಮೇಲೂ ಇದರ ಉತ್ತಮ ಪರಿಣಾಮವಾಗದಿರಲಿಲ್ಲ. ಇಡೀ ಜನ್ಮದಲ್ಲಿ ತಿಳಿಯಲಶಕ್ಯವಾದದ್ದು ತಿಳಿಯಿತೆಂದು ಹಾರ್ದಿಕವಾಗಿ ಒಪ್ಪಬೇಕಾಯಿತು. ಯಾರೂ ತಂತಮ್ಮ ದೃಷ್ಟಿಯಿಂದ ಅತೃಪ್ತರಾಗಿ ಹೊರಬೀಳಲಿಲ್ಲವೆಂಬದನ್ನು ಅವರವರ ಬರಹಗಳೇ ಹೇಳುತ್ತವೆ. ಎಲ್ಲರ ಡಾಯರಿಗಳೂ ಕಾದಿಡಲಾಗಿವೆ.

ಈ ಪ್ರಯೋಗದಲ್ಲಿ ಶಾಸ್ತ್ರೀಯ ಹಾಗೂ ಸಾಂಪ್ರದಾಯಿಕ ವೇದಾಂತಗಳಲ್ಲಿಯ ಮಹದಂತರದ ಅನುಭವ ಬಂದುದಲ್ಲದೆ, ವಸ್ತುಸ್ಥಿತಿ ಇವೆರಡನ್ನೂ ಮೀರಿದ್ದೆಂಬುದರ ಅರಿವಾದ್ದೊಂದು ವಿಶೇಷ. ಸಾಧಕರಲ್ಲಿ ಕೆಲವರು ಬಹುಶ್ರುತರಿದ್ದು ಉತ್ತಮವಾಗಿ ವೇದಾಂತ ಹೇಳುವ ರೂಢಿ ಇದ್ದವರೂ ಇದ್ದರು. ಆದರೆ ಅವರಿಗೆ ತಮ್ಮ ವೃತ್ತಿ, ಪ್ರಾಣಗಳ ಗತಿಗಳನ್ನೂ ಕೂಡ ತಿಳಿಯಲಾರದಷ್ಟು ತಾವು ಬಹಿರ್ಮುಖರಾಗಿರುವುದನ್ನು ಸ್ವತಃ ಒಪ್ಪಿಕೊಳ್ಳಬೇಕಾಗಿ ಬಂತು. ಇವರು ಸಾಧನೆಯ ಆರಂಭಕ್ಕೆ ಈ ಕ್ಯಾಂಪಿನಲ್ಲಿ ನಮಗೇನೂ ಅನುಭವವಾಗದಿದ್ದರೆ ನಿಮ್ಮ ಕಾರ್ಯಕ್ರಮ 'ಬೂಟಾಟಿ'ಯೆಂದು ಪತ್ರಿಕೆಗಳಲ್ಲಿ ಸಾರುವೆವೆಂದು ದೀಕ್ಷಿತರನ್ನು

ತುಡುಕಿದ್ದೂ, ಹಾಗೆ ಆದದ್ದೇ ಆದರೆ, ಅದಕ್ಕೆ ನಾನೂ ಸಹಿ ಮಾಡುವೆ ನೆಂದು ಅವರು ಉತ್ತರ ಕೊಟ್ಟಿದ್ದೂ ಈಗ ನೆನಪಾಗಿ ಕೌತುಕವಾಗುತ್ತದೆ.

ಹೀಗೆ ಮೂರು ತಿಂಗಳುಗಳು ಹಾ ಹಾ ಎನ್ನುವಷ್ಟರಲ್ಲಿ ಮುಗಿ ಯುತ್ತ ಬಂದವು. ಎಂಟು ದಿನ ಮೊದಲಿಗೆ ಸಮಾಪ್ತಿ ಸಮಾರಂಭದ ಅವಸರಕ್ಕೆ ಆರಂಭವಾಯಿತು. ತ್ರ್ಯಕ್ಷರೀ ಜಪಯಜ್ಞದ ಹವಸವು ಮಾತ್ರ ಸ್ಥಳದ ಆತಂಕದಿಂದ ನಿಂತಿತು. ಜಪಸಂಖ್ಯೆಯೇನೋ ೩೩ಕೋಟಿಗೆ ಮಿಕ್ಕಿಎಷ್ಟೋ ಹೆಚ್ಚಾಗಿದ್ದವೆನಬಹುದು. ಜಪಮಾಡುತ್ತಿದ್ದವರಲ್ಲಿ ಕೂಡ ಕೆಲವರಿಗಾದ ಪ್ರಗತಿ, ಅನುಭವಗಳು ಬಹಳೇ ಆಕರ್ಷಕವಾದವುಗಳಿವೆ. ದಿನಾಲು ೬೦ ಸಾವಿರ, ಒಂದೊಂದು ಲಕ್ಷದ ವರೆಗೂ ಜಪಮಾಡಿ ದವರಿದ್ದಾರೆ. ಕೆಲವು ಹುಡುಗರಿಗಂತೂ ವಿಷಮಜ್ವರದಲ್ಲಿ ಎಚ್ಚರ ತಪ್ಪಿ ದಾಗಲೂ ಜಪದ ಬಡಬಡಿಕೆಯೇ ಅಖಂಡವಾಗಿರುವಷ್ಟರ ಮಟ್ಟಿಗೆ ಅಭ್ಯಾಸ ಬಲಿತಿತ್ತೆಂದಿಷ್ಟು ಹೇಳಿದರೆ ಸಾಕು. ಅದರ ವಿಶೇಷ ವಿಚಾರ ಕ್ಕೀಗ ಅವಕಾಶವಿಲ್ಲ.

ಸಮಾರಂಭದ ಕೊನೆಯ ದಿನವಾದ ಶ್ರೀಗುರುಪ್ರತಿಪದೆ (ತಾ. ೫-೨-೫೮)ಯ ಕಾರ್ಯಕ್ರಮಗಳು ಗೊತ್ತಾಗಿ ನಿಮಂತ್ರಣ ಪತ್ರಿಕೆ ಗಳೂ ಹೊರಟವು. ಜಪಯಜ್ಞದಲ್ಲಿ ಭಾಗವಹಿಸಿದವರಿದ್ದ ಬೇರೆ ಬೇರೆ ಊರುಗಳಲ್ಲಿಯೂ ಈ ಸಮಾರಂಭ ನಡೆಯಿತು. ಅಂದು ಶ್ರೀಮಠದಲ್ಲಿ ಈ ನಿಮಿತ್ತವಾಗಿಯೇ ಸದಾಶಿವಗಡದ ಶ್ರೀ. ಗು. ಭ. ಪ. ಗೋವಿಂದ ಶಾಬಾಜಿ ಮಹಾಜನ ಇವರಿಂದ ಜಾತ್ರಾ ಮಹೋತ್ಸವ ನಡೆಸಲ್ಪಟ್ಟಿತು. ಮೊದಲು ಮೂರು ದಿನ ಊರಲ್ಲೆಲ್ಲ ಪ್ರಭಾತಫೇರಿಗಳು ಹೊರಟಿದ್ದವು. ಕ್ಷೇತ್ರದ ಮುಖ್ಯ ಸ್ಥಳಗಳಲ್ಲೆಲ್ಲ ಆರಂಭಿಸಲ್ಪಟ್ಟ ಶ್ರೀಗುರುಚರಿತ್ರ ಸಪ್ತಾಹ ಪಾರಾಯಣಗಳೂ, ಕೀರ್ತನ ಸಪ್ತಾಹವೂ, ಪ್ರವಚನವೂ, ಅಖಂಡ ಭಜನವೂ ಕೊನೆಗಂಡವು. ಶ್ರೀಮನ್ಮಹಾರಾಜರ ಕವಿತೆಗಳ ಕಂಠಪಾಠ ಪರೀಕ್ಷೆಯಾಗಿ ಉತ್ತೀರ್ಣರಾದವರಿಗೆ ಪ್ರಸಾದ ಪುಸ್ತಕ ಗಳನ್ನು ಕೊಡಲಾಯಿತು. ಮುಕ್ತಿಮಂದಿರವಲ್ಲಿ ಶ್ರೀಮನ್ಮಹಾರಾಜರ ಹಸ್ತಾಕ್ಷರಗಳ ಸ್ಮಾರಕದ ಉದ್ಘಾಟನೆಯನ್ನೂ ಅಂದೇ ಸಾಯಂಕಾಲ

ಮಹಾರಾಜರ ಪ್ರೀತಿಯ ಶಿಷ್ಯರಲ್ಲೊಬ್ಬರಾದ ಶ್ರೀಗುರುಬಂಧು ರಾಮಚಂದ್ರ ಪುಂಡಲೀಕ ಪವಾರ, ಪೇನಶನರ ಮಾಜಾಳಿ, ಇವರಿಂದ ಜರುಗಿಸಲ್ಪಟ್ಟಿತು. ಸದ್ಯದಲ್ಲಿಯೇ ಇವರು ಶ್ರೀಮಠದ ಅಧ್ಯಕ್ಷರ ಗದ್ದುಗೆಗೆ ಬಂದಿದ್ದಾರೆ. ಕೋಡೀಬಾಗ ತಾರೀವಾಡೆಯಲ್ಲಿ ಶ್ರೀ.ಗು.ಭ.ಪ. ರಾಮಚಂದ್ರ ಫಕೀರ ಮಾಂಜರೇಕರ ಇವರು ಸಾಂಪ್ರದಾಯಿಕರ ಉಪಾಸನೆಗಾಗಿ ಕಟ್ಟಿಕೊಂಡ ಮಂದಿರದ ಪ್ರಾರಂಭೋತ್ಸವವು ಶ್ರೀಯೋಗೀಶ್ವರರಿಂದಾಗಿ ಅದಕ್ಕೆ ಶ್ರೀಪದ್ಮನಾಭಮಂದಿರವೆಂದು ಹೆಸರು ಇಡಲಾಯಿತು. ಕೊನೆಗೆ ಶ್ರೀಮಠದ ರಥೋತ್ಸವವಾದ ಮೇಲೆ ಹರಿಹರದಿಂದ ತಂದ ತೀರ್ಥಪ್ರಸಾದವನ್ನು ಭಕ್ತರಿಗೆಲ್ಲ ಕೊಡುವಾಗ ಜಪಯಜ್ಞದಲ್ಲಿ ಭಾಗವಹಿಸಿದವರಲ್ಲಿ ಸಮಕ್ಷ ಉತ್ಸವಕ್ಕೆ ಬಂದವರಿಂದ ಫಲಾರ್ಪಣೆಯ ನೀರು ಬಿಡಿಸಿದರು.

ಈ ಜಪಯಜ್ಞದ ಪೂರ್ಣಫಲವನ್ನು ಪ್ರತ್ಯಕ್ಷ ಪಾರ್ವತೀ ಪರಮೇಶ್ವರರಂತಿದ್ದ ತಮ್ಮ ಮಾತಾಪಿತೃಗಳ ಚರಣಗಳಲ್ಲಿಯೇ ಅರ್ಪಿಸ ಬೇಕೆಂಬುದು ದತ್ತಮೂರ್ತಿಯವರ ಸಂಕಲ್ಪವಾಗಿತ್ತು. ಆದರೆ ಈ ಕಾರ್ಯಕ್ರಮ ಮುಗಿಯುವ ಮೊದಲಿಗೇ ಪೂಜ್ಯ ಮಾತೃಶ್ರೀ ಗಂಗವ್ವ ನವರು ಈಶ್ವರ ಸಂ. ಮಾರ್ಗ. ಬ. ನವಮಿ ರವಿವಾರ ತಾ. ೨೬-೧೨-೩೭ ನೆಯದಿನ ಬೆಳಗಿನ ೧ಂಕ್ಕೆ ಹರಿಹರದಲ್ಲಿ ಪರಂಧಾಮವನ್ನೈದಿದರು. ಮುಂದೆ ೫ ತಿಂಗಳಿಗೆ ಆಚಾರ್ಯೋತ್ಸವದಲ್ಲಿ—ಬಹುಧಾನ್ಯ ವೈಶಾಖ ಶುದ್ಧ ದ್ವಾದಶಿಯದಿನ, ಪಿತೃದೇವರು ಸನ್ಯಾಸಸ್ವೀಕರಿಸಿ ಹರಿಹರದ ಲ್ಲಿಯೇ ಉಳಿದುಕೊಂಡಿದ್ದಾರೆ. ಅದು ಕಾರಣ ಅಂದೇ ಬೆಳಿಗ್ಗೆ ಹರಿಹರದಲ್ಲಿ ಶ್ರೀಶಿವಾನಂದತೀರ್ಥಸ್ವಾಮಿಗಳ ಚರಣಗಳಲ್ಲಿ ಪೂಜಾಪೂರ್ವಕವಾಗಿ ಜಪಯಜ್ಞದ ಪೂರ್ಣ ಫಲಾರ್ಪಣಮಾಡಿ ಹಾಗೆಯೇ ಸಾಯಂಕಾಲ ದೊಳಗೆ ಕಾರವಾರಕ್ಕೆ ಅದೇ ತೀರ್ಥಪ್ರಸಾದ ತರಲಾಗಿತ್ತು. ಈ ಕೆಲಸ ಶ್ರೀ. ಗು. ಪ. ಹೆಗ್ಗಡೆ ಲಕ್ಷ್ಮಣಯ್ಯನವರಿಗೆ ಒಪ್ಪಿಸಿದ್ದು ವ್ಯವಸ್ಥಿತವಾಗಿ ಕೊನೆಗಂಡಿತು.

ಪೂರ್ಣಫಲದ ಅರ್ಧಪಾಲಿಗೆ ಹಕ್ಕುದಾರರಾದ ಮಾತೃಶ್ರೀಗಳಿಲ್ಲದ್ದ ರಿಂದ ಎಲ್ಲರಿಗೂ ಬಹಳ ವಿಷಾದವೆನಿಸಿತ್ತು. ಆದರೆ ಅವರ ವರ್ಷಾಂತಿಕವು

ಸಾಧನದ ಮೂರುತಿಂಗಳ ನಡುವೇ ಬಂದುದರಿಂದ, ಪ್ರತ್ಯಕ್ಷವಲ್ಲದಿದ್ದರೂ ಸೂಕ್ಷ್ಮರೂಪದಿಂದಲಾದರೂ ಬಂದು ಸಾಧಕರನೆಲ್ಲ ಆಶೀರ್ವದಿಸಿ ಪ್ರಸಾದಭಾಗಿಗಳನ್ನಾಗಿ ಮಾಡಿದ್ದಕ್ಕೆ ಬಹಳಮಟ್ಟಿಗೆ ಸಮಾಧಾನ ವಾಯಿತೆಂದು ಉಲ್ಲೇಖಿಸಲು ಸಂತೋಷವಾಗುತ್ತದೆ.

ರಾತ್ರಿ ೧೧ರ ನಂತರ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ಎಲ್ಲ ಉಪಾಸಕಭಕ್ತರೊಡನೆ ಭೋಜನವಾಯಿತು. ಅಂದಿನ ಜನಸಮ್ಮರ್ದ ಭಾರಿ. ಮುಕ್ತಿಮಂದಿರಕ್ಕೆ ಮಂದಿ ರೇಜಿಟ್ಟಿತ್ತು. ಈ ರೀತಿ ಮೂರು ತಿಂಗಳು ಹಗಲೂ ರಾತ್ರಿ ಅಖಂಡವಾಗಿ ನಡೆದ ಉಪಾಸನೆಗಳೆಲ್ಲ ಒಮ್ಮೆಗೇ ಸಂಪೂರ್ತಿಯಾಗಿ ಮರುದಿನ ಪರಸ್ಥಳದವರು ಹೊರಡಲನುವಾದರು. ಸಾಧಕರನ್ನು ಬೀಳ್ಕೊಡುವಾಗಿನ ಸಂದೇಶ ಬಹಳ ಹೃದಯಂಗಮ ವಾಗಿತ್ತು. ನಿಷ್ಠೆಗಾಗಿ ನಡಕೊಳ್ಳಬೇಕಾಗಿರುವ ರೀತಿ ನೀತಿಗಳನ್ನು ಸುಂದರ ಸಮೀಚೀನವಾಗಿ ವಿವೇಚಿಸಿ ತಮ್ಮ ಗುರು ಹಾಗೂ ಪರಮ ಗುರುಬಂಧುಗಳಾಗಿದ್ದೂ ತಮ್ಮಲ್ಲಿ ಪ್ರೀತಿಯಿಟ್ಟು ಸಾಧನೆಗಾಗಿ ಬಂದಿದ್ದುಕೊಂಡ ಸಾಧಕರ ಮಮತೆ, ಮುಮುಕ್ಷುತ್ವಗಳನ್ನು ಹಾರ್ದಿಕ ವಾಗಿ ಅಭಿನಂದಿಸಿ ಅಪ್ಪಣೆ ಕೊಟ್ಟದ್ದಾಯಿತು.

ಶ್ರೀಮಠದ ವ್ಯವಸ್ಥಾಪಕರು ನಮ್ಮೀ ಕೆಲಸವನ್ನು ಪುರಸ್ಕರಿಸಿ ಸಾಮಾನುಸಟ್ಟು ಕೊಟ್ಟು ಸಹಕರಿಸಿದರು. ಇವರ ಕೃಪೆಯಿಂದಲೇ ಸಾಧಕರಿಗೆ ಶ್ರೀಗಳ ವಾಸಭೂಮಿ ಸಾಧನೆಗಾಗಿ ಸಿಕ್ಕಿತು. ಅಖಂಡಭಜನ ಮತ್ತು ಮಂಟಪ ನಿರ್ಮಾಣಕಾರ್ಯಗಳಲ್ಲಿ ಕ್ಷತ್ರಿಯ ಕುಮಾರಪಂತ ಹಾಗೂ ಭಂಡಾರೀ ತರುಣ ಭ ಜ ಕ ವ ರ್ಗ ದ ವ ರಿಂ ದಾ ದ ನೆರವು ಮರೆಯುವಂತಿಲ್ಲ. ಪರ್ಣಕುಟಿ, ಮಂಟಪಗಳಿಗೆ ಶ್ರೀಸಾಂಪ್ರದಾಯಿಕ ಪಾಂಡು ಪುತ್ತಿ ಕೋಳಂಬಕರ ಇವರು ಸಾಕಾಗುವಷ್ಟು ಮಡ್ಲು ಗಳನ್ನು ಕೊಡದಿದ್ದರೆ ನಾವು ಬಹಳ ಪೇಚ್ಚಕ್ಕೀಡಾಗುತ್ತಿದ್ದೆವು. ಅವರದು ದೊಡ್ಡ ಸಹಾಯವಾಯಿತು. ಮೊದಲಿನಿಂದಲೂ ನಮಗೆ ಕೋಠೀ ಕೋಣೆಯಂತೆ ಆಹಾರಸಾಮಗ್ರಿಗಳನ್ನೊದಗಿಸಿದ ಶ್ರೀ. ಗು. ಭ. ನಾಗಪ್ಪ ದೇವಪ್ಪ ಶೆಟ್ಟಿ ವ್ಯಾಪಾರಿ, ಕಾರವಾರ. ಈ ಬಂಧುಗಳನ್ನೂ ನೆನೆಯದಿರು

ವಂತಿಲ್ಲ. ಸದಾಶಿವಗಡದ ವಿಠೋಬಶೆಟ್ಟರ ಸಹಾಯವಂತೂ ನಮ್ಮೆಲ್ಲ ಕಾರ್ಯಗಳಿಗೂ ಇದ್ದದ್ದೇ.

ಮೂರುತಿಂಗಳು ಸಾಧಕರಿಗೆ ಹೊತ್ತಿಗೆ ಸರಿಯಾಗಿ ಎರಡೂ ವೇಳೆ ಊಟ ಉಪಚಾರಗಳಲ್ಲಿ ಬಹಳ ದಕ್ಷತೆವಹಿಸಿ ಹೊಣೆಗಾರಿಕೆಯಿಂದ ಕೆಲಸ ಮಾಡಿದ ಶ್ರೀಗುರುಭಗಿನಿ ಭಾವೀಕೇರಿ ಪಾರ್ವತೀಬಾಯಿ, ಗೋಕರ್ಣ ಗಂಗಾಬಾಯಿಯವರನ್ನೂ, ಉಳಿದೆಲ್ಲ ಕೆಲಸಗಳನ್ನು ನಿರ್ವಹಿಸಿದ ಬಿಣಗಾ ಗುಣಾಬಾಯಿಯನ್ನೂ, ಸ್ವತಃ ದೀಕ್ಷಿತರ ಸೌಭಾಗ್ಯವತಿ ಕೃಷ್ಣಾಬಾಯಿಯವರನ್ನೂ ಅಭಿನಂದಿಸಲೇಬೇಕು. ಉಳಿದೆಲ್ಲ ಗುರುಬಂಧುಭಗಿನಿಯರು ನಮ್ಮನ್ನೂ ನಮ್ಮ ಕಾರ್ಯವನ್ನೂ ತಮ್ಮದೆಂದು ನೋಡಿಕೊಂಡದ್ದಕ್ಕಾಗಿ ಆಭಾರ ಮನ್ನಿಸಿ ಶ್ರೀಸನ್ನಿಧಿಯಲ್ಲಿ ಅವರೆಲ್ಲರ ಅಭೀಷ್ಟಚಿಂತನೆ ಮಾಡಲಾಗಿದೆ.

ಈ ಕೆಲಸದಲ್ಲಿ ಖರ್ಚಿಗಾಗಿ ಯಾರೂ ಯಾರನ್ನೂ ಕೇಳಿಲ್ಲ. ಸಾಧಕರಿಂದ ಖರ್ಚು ತಕ್ಕೊಂಡು ಊಟ ಹಾಕಿ ಸಾಧನ ಮಾಡಿಸುವದು ವೈದಿಕ ಸಂಸ್ಕೃತಿಗೆ ಸಲ್ಲದೆಂದೇ ನಿಶ್ಚಯಿಸಿತ್ತು. ಹೀಗಿದ್ದೂ ಆನೆಯ ಪ್ರಕಟನೆಯಲ್ಲಿ "ನಿಮ್ಮ ಪೂರ್ಣ ಖರ್ಚು ನೀವೇ ವಹಿಸಿಕೊಳ್ಳುವಿರೋ ಹೇಗೆ?" ಎಂದು ಸಾಧಕರನ್ನು ಕೇಳಿದ ಪ್ರಶ್ನ, ಬರಿಯ ಪರೀಕ್ಷೆಯ ಪ್ರಶ್ನೆ ಮಾತ್ರ! ನಿಜವಾಗಿ ಇದಕ್ಕೆಂದು ಅವರಿಂದ ಖರ್ಚು ತಕ್ಕೊಂಡಿಲ್ಲ, ಮುಂದಾದರೂ ತಕ್ಕೊಳ್ಳುವ ಇಚ್ಛೆ ಇಲ್ಲ. ಹೀಗಾಗಿ ಗೊತ್ತಾದಂತೆ ೩೦೦ ರೂ. ಸಾಲ ಮೈಮೇಲೆ ಬಂದಿದೆ.

ಹೀಗೆಯೇ ವರ್ಷಂಪ್ರತಿ ಕ್ಯಾಂಪು ನಡೆಯಿಸುವ ಬಗ್ಗೆ ಈ ಕಾರ್ಯಕ್ಕೆಂದೇ ಪ್ರತಿವರ್ಷ ೧೦ ರೂ. ಗಳಂತೆ ನಿಷ್ಕಾಮಬುದ್ಧಿಯಿಂದ ಸಲ್ಲಿಸುವದಾಗಿ ಸಾಂಪ್ರದಾಯಿಕರನೇಕರು ಒತ್ತಾಯ ಮಾಡಿದರು. ಎಂತೆಯೇ ತ್ರೈಮಾಸಿಕ ಪರಮಾರ್ಥ ಸಾಧನೆಯ ೨ನೆಯ ಶಿಬಿರ ಈ ಸಲ ಹರಿಹರದಲ್ಲಿ ನಿಶ್ಚಿತವಾಗಿ ಅದರ ಡಂಗುರವೂ ಪ್ರಸಿದ್ಧವಾಗಿದೆ. ಆರು ಪ್ರವಚನಗಳ ಕೊನೆಯ ಪುಟ ನೋಡಿ.

ಒಬ್ಬಿಬ್ಬರ ಸಹಾಯದಿಂದ ನೀಗುವ ಕೆಲಸವಿದಲ್ಲ. ಸಾಧಕರು

ಹೆಚ್ಚಾದಂತೆ ದುಡ್ಡೂ ಹೆಚ್ಚು ಬೇಕು. ಸದ್ಯ ನಾವು ಈ ವಿಷಯ ವಿಶೇಷವಾಗಿ ಯಾರ ಮುಂದೂ ಎತ್ತಿಲ್ಲ. ಈ ಸಮಾಚಾರ ತಿಳಿದು ಭೆಟ್ಟಿಯಾದಾಗ ತಾವಾಗಿ ಒಪ್ಪಿಗೆ ಕೊಟ್ಟವರ ಹೆಸರುಗಳಷ್ಟೇ ಈ ಕೆಳಗೆ ಕೊಡಲ್ಪಟ್ಟಿವೆ. ಅಧ್ಯಾತ್ಮಪ್ರೇಮಿಗಳಾದ ಮಹನೀಯರೆಲ್ಲರೂ ನೆರವಾಗ ಬಹುದು. ೫೦ ಜನ ಸ್ಥಿರಸಹಾಯಕರಾದರೆ ನಿಶ್ಚಿಂತೆಯಿಂದ ಕೆಲಸ ನಡೆಯುತ್ತಿದೆ. ರಾಮೇಶ್ವರದಿಂದ ಕಾಶಿಯ ವರೆಗೂ ಹಬ್ಬಿಕೊಂಡಿರುವ ನಮ್ಮೀ ಜ್ಞಾನಸಾಂಪ್ರದಾಯಕ್ಕೆ ವರ್ಷಾ ಇಂಥ ನಾಲ್ಕು ಕ್ಯಾಂಪು ಗಳನ್ನು ಕೂಡ ನಡೆಯಿಸುವದು ದೊಡ್ಡ ಮಾತಲ್ಲ. ಮೇಲಾಗಿ ಕೆಲಸ ತನ್ನಿಂದೇ. ಮನಸು ಬರಬೇಕಷ್ಟೇ!

## ಇನ್ನು ಪ್ರತಿವರ್ಷವೂ ಪರಮಾರ್ಥಸಾಧನೆಯ ಶಿಬಿರಕ್ಕೆ ಸಹಾಯ ಮಾಡುವವರು

೧. ಶ್ರೀ. ಗು. ಭ. ಪ. ಪುರುಷೋತ್ತಮ ಬಾಳಕೃಷ್ಣ ನಾಯಿಕ, ಅಸ್ನೋಟಿ
೨. ,, ಶೇಷಗಿರಿ ಸದಾಶಿವ ಶೆಟ್ಟಿ, ಬಾಡ.
೩. ,, ರಾಮಾ ಸಾನು ನಾಯಿಕ, ಬಾಡ.
೪. ,, ಹನುಮಾ ನಾಗಪ್ಪಾ ಮಾಳಸೇಕರ, ಬಿಣಗಾ.
೫. ,, ಉಮಾಕಾಂತ ನಾಯಿಕ, ಕೋಡೀಬಾಗ.
೬. ,, ಕೃಷ್ಣಾ ಶಿಂದೇ, ಪಾಟೀಲ ಬೈತಖೋಲ.
೭. ,, ಪದ್ಮನಾಭ ವಾಸುದೇವ ಶೆಟ್ಟಿ, ಹೊನ್ನಾವರ.
೮. ,, ನಾಗಪ್ಪಾ ವೆಂಕಟೇಶ ಶೆಟ್ಟಿ, ಅಂಕೋಲಾ.
೯. ,, ಮಿಶ್ರಿಕೋಟಿ ದೀಕ್ಷಿತ ಬಂಧುಗಳು, ಹುಬ್ಬಳ್ಳಿ.
೧೦. ,, ಎಂ. ವ್ಹಿ. ಘಾಟಕ, ಬೈಲಹೊಂಗಲ.
೧೧. ,, ಒಬ್ಬ ಗುರುಭಗಿನಿ.

ಕೆಲವರ ಹೆಸರು ಅವರನ್ನು ಕೇಳದೇ ನಾವು ಹಾಕುವಂತಿದ್ದರೂ ಕಾಯಿದೆ ಮೀರಬಾರದೆಂದು ಹಾಗೆ ಮಾಡಿಲ್ಲ. ಅವರು ಅನ್ಯಥಾ ಭಾವಿಸದೆ ಬರಕೊಳ್ಳಬೇಕು.

ಇದೇ ಅಶ್ವೀಜ ಅಮಾವಾಸ್ಯೆಯೊಳಗಾಗಿ ಈ ವಾರ್ಷಿಕ ಕಾಣಿಕೆ ನಮಗೆ ತಲುಪಬೇಕು. ಸಮಕ್ಷ ತಲುಪಿಸಲು ಶಕ್ಯವಿಲ್ಲದವರು ಎ

ಸಾರೆಗೆ ಮಾತ್ರ ಈ ಕೆಳಗಿನ ವಿಳಾಸಕ್ಕೆ ಮನಿಆರ್ಡರ ಮಾಡಬೇಕು. ಹಣ ತಲುಪಿದ್ದಕ್ಕೆ ನಮ್ಮಿಂದ ಉತ್ತರ ಬರದಿದ್ದರೆ ನಮ್ಮನ್ನು ಬರೆದು ಕೇಳಲು ಮರೆಯಬಾರದು.

ವಿಳಾಸ: **ಓಂ ಕೇವಲ C/o ಜಿ. ವಿರೂಪಾಕ್ಷನಾಯಿಕ,**
ಸರಾಫರು, ಹರಿಹರ. (ಮೈಸೂರು ಸೀಮೆ).

ಮೂರು ತಿಂಗಳ ನಂತರ ಮನೆಗೆ ಹೋದ ಮೇಲೂ ಬಹುಶಃ ಯಾವ ಸಾಧಕರ ಪ್ರಗತಿಯೂ ಕುಂದಿಲ್ಲ. ಕೆಲವರಲ್ಲಂತೂ ಕೆಲಸ ಮಾಡು ತ್ತಿದ್ದಾಗ ಕೂಡ ಒಮ್ಮೊಮ್ಮೆ ಸಾಕ್ಷಿಸಮರಸರಾಗಿ ಮೈಮರೆವಷ್ಟು ಅನುಸಂಧಾನ ಸಹಜವಾಗಿದೆ. ಅದರ ಮರೆವಾಗುವ ಮಾತೇಕೆ? ಕೆಲವರ ಆಯುಷ್ಯದಲ್ಲಿಯೇ ಮಾರ್ಪಾಟಾಗಿರುವದನ್ನು ಪರಿಚಿತರೇ ಒಪ್ಪುತ್ತಾರೆ. ಇದು ಫಲಿತಾಂಶ.

ಮುಕ್ತಿಮಂದಿರದ ಮಹಿಮೆಯ ವಿಷಯವಾಗಿ ಇನ್ನೆರಡುಮಾತು ಹೇಳದಿರುವಂತಿಲ್ಲ. ಸಮಾಧಿಗಳಿರುವ ಈ ಸಣ್ಣ ಬೈಲಗುಡಿಯ ಮುಂದೆ ಹೀಗೆ ಮೂರು ತಿಂಗಳು ಅಖಂಡ ಮಹೋತ್ಸವವಾಗಬಹುದೆಂಬ ವಿಚಾರ, ಯಾರ ಕನಸುಮನಸಿನಲ್ಲಿಯೂ ಬಂದಿರಲಿಲ್ಲ. ಅಂಥದು ಸುಲಭ ವಾಗಿ ನಡೆದುಹೋಯಿತು. ಯಾರೂ ಇಣಿಕಿನೋಡದ ಮೂಲೆಯಲ್ಲಿದ್ದ ಮುಕ್ತಿಮಂದಿರ, ಮಹಾಉಪಾಸನೆಗಳನ್ನೆಲ್ಲ ತನ್ನೆದುರಿಗೇ ನಡೆಯಿಸಿ ಕೊಳ್ಳುತ್ತಿರುವ ಚಮತ್ಕಾರ ನೋಡಿ! ಮಹಾವಿರಕ್ತರೂ, ಉಚ್ಚ ಕೋಟಿಯ ಗುರುಭಕ್ತರೂ ಆದ ನಮ್ಮ ಪೂಜ್ಯ ಗುರುಬಂಧುತ್ರಯದ ತಪಃಪ್ರಭಾವ ಅಗಾಧ! ಸಾಂಪ್ರದಾಯಿಕರ ಅಧ್ಯಾತ್ಮದ ಉನ್ನತಿಯು ಕಳವಳದಿಂದ ಸೂಸುತ್ತಿದ್ದ ಅವರ ಶುಭಸಂಕಲ್ಪಗಳ ಅದೃಷ್ಟಪುಣ್ಯದ ಫಲವಲ್ಲವೇ ಇದು!

ಕಾರವಾರಜಿಲ್ಲೆಯ ಕೆಚ್ಚಿನ ಕನ್ನಡಿಗರಾದ ಕ್ಷತ್ರಿಯ ಕುಮಾರಪಂತ ಪಂಗಡದ ಪುನಃಸಂಸ್ಕಾರದ ಉಪಕ್ರಮ ಕೂಡ ಮುಕ್ತಿಮಂದಿರ ದಲ್ಲಿಯೇ ಆದ್ದು ಮತ್ತೊಂದು ಸಂಗತಿ. ಧರ್ಮಜಾಗ್ರತಿಯ ಈ ದೊಡ್ಡ ಕೆಲಸ ಶ್ರೀ. ದತ್ತಮೂರ್ತಿಯವರ ಚಾಲನೆ, ನೇತೃತ್ವಗಳಲ್ಲಿ ನಡೆಯಿತು.

ಶ್ರೀಸಾಂಪ್ರದಾಯಿಕರಾದ ಪಂಡಿತ ಶ್ರೀಪಾದಶಾಸ್ತ್ರಿ ಜಡೆವೈದ್ಯ ಇವರು ಮುಖ್ಯ ಪ್ರಯೋಗಸ್ಥಾನದಲ್ಲಿದ್ದರು. ಮಾಘಕೃಷ್ಣ ಚತುರ್ದಶಿ ಗುರುವಾರ (೧೬-೨-೬೯) ದ ಮೊದಲನೆಯ ಸಮಾರಂಭ, ಶ್ರೀಸಾಂಪ್ರದಾಯಿಕ ವಾಸು ಸಾಸು ನಾಯಿಕರ ಯಜಮಾನತ್ವದಲ್ಲಿ ಯಶಸ್ವಿಯಾಯಿತು. ಈ ಪ್ರಸಂಗದಲ್ಲಿ ಕಂಡುಬಂದ ವಾಸುಸಾಯಿಕರ ಹಾಗು ಆ ಸಮಾಜದ ತರುಣರ ಧರ್ಮಪ್ರೀತಿ, ಗುರುಭಕ್ತಿ, ಸತ್ಯನಿಷ್ಠೆ, ಸ್ವಾಭಿಮಾನಗಳು ಪ್ರಶಂಸನೀಯವಾದವು. ಬಂಗಾರದ ಅಕ್ಷರಗಳಿಂದ ಬರೆದಿಡುವ ಪ್ರಸಂಗ ಇದು.

ಇನ್ನು ಈ ಸಲ ಪರಮಗುರುಸ್ಥಾನದಲ್ಲಿ ನಡೆದಂತೆ ಮುಂದಿನ ಸಾರೆ ತ್ರೈಮಾಸಿಕ ಪರಮಾರ್ಥ ಸಾಧನೆಯ ಎರಡನೇ ಶಿಬಿರ (ಕ್ಯಾಂಪು) ಶ್ರೀಗುರುಸ್ಥಾನವಾದ ಹರಿಹರ ಕ್ಷೇತ್ರದಲ್ಲಿ ಶ್ರೀಸನ್ನಿಧಿಯ ಸಮಕ್ಷ ನಡೆಸಲಾಗುತ್ತಿದೆ. ಸಾಂಪ್ರದಾಯಿಕರಿಗೂ ಇತರ ಸಾಧಕರಿಗೂ ಇಂಥ ಸುಸಂಧಿ ನಿಜವಾಗಿ ದುರ್ಲಭ. ಇವಾವ ವಿಷಯಗಳಲ್ಲಿ ಸಂಶಯ ಬಂದರೂ ಶ್ರೀ. ದತ್ತಮೂರ್ತಿಯವರನ್ನು ಸಂಧಿಸಿ ನಿರ್ದಾಕ್ಷಿಣ್ಯವಾಗಿ ಕೇಳಿಕೊಳ್ಳಬೇಕೆಂದು ಸೂಚಿಸಿ ಇಲ್ಲಿಗೆ ಈ ಸಂಕ್ಷಿಪ್ತ ವರದಿಯ ಬರೆಹವನ್ನು ನಿಲ್ಲಿಸಿದೆ.

ಇದೆಲ್ಲ ಯಾವ ದಯಾಮಯನಿಂದ ನಡೆಯುವದೆಂದು ನಂಬಿರುವೆವೋ, ತನ್ನ ವ್ಯವಸ್ಥಾಪತ್ರದ ಏಳನೆಯ ನಿಯಮದಲ್ಲಿ ಕಂಡ ತನ್ನ "ಉಪಾಯಯೋಜನೆ"ಯ ಅರ್ಥವನ್ನು ಈ ಮೂಲಕವಾಗಿ ನಮಗೆ ಮನಗಾಣಿಸಿಕೊಟ್ಟನೋ, ಆ ಸರ್ವಾತ್ಮನಾದ ಸದ್ಗುರು ಶ್ರೀಪದ್ಮನಾಭನ ಪಾದಾರವಿಂದಗಳಿಗಿದು ಕೃತಿಯಾಗಿರಲೆಂದುಕೊಂಡಿರುವೆನು.

ತಮ್ಮವರಾದ,

**ಕೇ. ಶ್ರೀಪಾದರಾಯ,**
ಶ್ರೀಗುರುದತ್ತಾತ್ರೇಯ ತ್ರ್ಯಕ್ಷರೀ
ಜಪಯಜ್ಞ ವಿಭಾಗದ
ಕಾರ್ಯದರ್ಶಿ.

**ಮೂಡಲಗಿರಿ ವೆಂಕಟೇಶ ತದಡಿ,**
ತ್ರೈಮಾಸಿಕ ಪರಮಾರ್ಥಸಾಧನ
ಮತ್ತು ಅಖಂಡ ಭಜನ ವಿಭಾಗದ
ಕಾರ್ಯದರ್ಶಿ.

ತಯಾರಿಸಿದ ತಾ. ೨೫-೯-೧೯೬೯.

# ಮಾನ್ಯರ ಅಭಿಪ್ರಾಯಗಳು



ಈ ಭಾಷಣವು ವೇದಾಂತ ವಿಚಾರದ ಮರ್ಮವನ್ನು ಬಹು ಸ್ವಾರಸ್ಯವಾಗಿ ಹೃದಯಕ್ಕೆ ಒಪ್ಪಾಗುವ ರೀತಿಯಲ್ಲಿ ಹೊರಗೆಡವಿರುತ್ತದೆ. ಆತ್ಮಾನಾತ್ಮವಿವೇಕವನ್ನು ಮಾಡಿಕೊಂಡು ಸ್ವಸ್ವರೂಪವನ್ನು ಕಂಡು ಕೊಳ್ಳುವ ಮಾರ್ಗವನ್ನು ಉಪನಿಷತ್ತಿಗೆ ಎಲ್ಲಾ ಬಗೆಯಿಂದಲೂ ಹೊಂದಿ ಕೊಂಡಿರುವ ಪ್ರಕಾರದಿಂದಲೇ ತಿಳಿಯಿಸಲಾಗಿದೆ. ಮಹಾವಾಕ್ಯದಿಂದ ಅದ್ವಿತೀಯ ಬ್ರಹ್ಮಾತ್ಮಸ್ವರೂಪದ ಸಾಕ್ಷಾತ್ಕಾರವು ಹೇಗೆ ಆಗುವ ದೆಂಬದನ್ನು ತಿಳಿಯಿಸುವ ಮತ್ತೊಂದು ಭಾಷಣದ ಅಥವಾ ಲೇಖನದ ಸಹಾಯವು ದೊರೆತರೆ ವೇದಾಂತದ ಪ್ರಕ್ರಿಯೆಯನ್ನೇ ಪೂರ್ಣವಾಗಿ ಜಿಜ್ಞಾಸುಗಳಿಗೆ ವಿವರಿಸಿದಂತಾಗುವದರಲ್ಲಿ ಸಂಶಯವಿಲ್ಲ.

೧೬-೮-೧೯೩೪ — ವೈ. ಸುಬ್ಬರಾವ್

ಹೊಳೆನರಸೀಪುರ — ಸಂಪಾದಕ, ಅಧ್ಯಾತ್ಮಪ್ರಕಾಶ.



ಶ್ರೀ. ನಾರಾಯಣರಾವ ಕುಲಕರಣಿ ಇವರ "ವೇದಾಂತದ ಒಳದಾರಿ" ಎಂಬ ಉಪನ್ಯಾಸಗಳನ್ನು ಆ ಮೂಲಾಗ್ರವಾಗಿ ಓದಿದೆನು. ಅದರಲ್ಲಿ ಉಪನಿಷತ್ತಿನ ರಹಸ್ಯವು ತುಂಬಿತುಳುಕುತ್ತಿರುವದು. ಸಾಮಾನ್ಯ ಜನರು ಕೂಡ ಓದಿದರೂ ವೇದಾಂತದ ರಹಸ್ಯವು ಸುಲಭವಾಗಿ ತಿಳಿಯುವ ದೆಂಬುದರಲ್ಲಿ ಸಂಶಯವಿಲ್ಲ. ಮತ್ತು ಬ್ರ. ದತ್ತಾತ್ರೇಯ ದೀಕ್ಷಿತ ಬಂಕಾಪೂರ ಇವರು ತ್ರೈಮಾಸಿಕ ಪರಮಾರ್ಥ ಸಾಧನೆಯ ಯೋಜನೆ ಮಾಡಿದ್ದು ತಿಳಿದು ಬಹಳ ಸಂತೋಷವಾಯಿತು. ಈ ಯೋಜನೆಯು ವೇದಾಂತ ರಹಸ್ಯವನ್ನು ಪೂರ್ಣವಾಗಿ ಅನುಭವಕ್ಕೆ ತಂದುಕೊಡಲಿಕ್ಕೆ ಬಹಳ ಅನುಕೂಲವಾದದ್ದಾಗಿ ತೋರುತ್ತದೆ. ಈ ಯೋಜನೆಯ ಲಾಭವನ್ನು ಎಲ್ಲರೂ ತೆಗೆದುಕೊಂಡು ನಮ್ಮ ಭಗವತ್ಪಾದರವರ ಅದ್ವೈತ

ಸಿದ್ಧಾಂತವನ್ನು ಎಲ್ಲ ಕಡೆಗೂ ಪ್ರಚುರಗೊಳಿಸಬೇಕೆಂದು ನನ್ನ ಆಗ್ರಹದ ಸೂಚನೆ.

ಈ ಮೇಲಿನ ಉಭಯತರಿಗೂ ಈ ಕಾರ್ಯದಲ್ಲಿ ಸಚ್ಚಿದಾನಂದ ಸ್ವರೂಪ ಭಗವಾನ್ ಶ್ರೀಚಿದಂಬರೇಶ್ವರನು ಪೂರ್ಣ ಆಯುರಾರೋಗ್ಯ ಕೊಟ್ಟು ಇಂಥ ಲೋಕೋಪಕಾರದ ಕಾರ್ಯಗಳನ್ನು ಮಾಡಲು ಉತ್ತರೋತ್ತರ ಉತ್ಸಾಹವನ್ನು ದಯಪಾಲಿಸಲೆಂದು ಕೋರುತ್ತೇನೆ.

ಮು. ಮದಿಹಾಳ, ಧಾರವಾಡ

೧೮೬೧ ಭಾದ್ರ. ಶು. ೧೩ ಮಂಗಳವಾರ **ಚಿದಂಬರದಿಕ್ಷೀತ ಬಡ್ಲಿ**

---

ನಾವು ಮಹಾರಾಜಶ್ರೀ ಕುಲಕರ್ಣಿ ನಾರಾಯಣರಾಯರು ಎಮ್. ಎ. ಎಲ್. ಎಲ್. ಬಿ. ಇವರು ತ್ರೈಮಾಸಿಕ ಪರಮಾರ್ಥ ಸಾಧನದ ಶಿಬಿರದಲ್ಲಿ ಮಾಡಿದ ಆರು ಪ್ರವಚನಗಳ ಸಾರವಾದ "ವೇದಾಂತದ ಒಳದಾರಿ" ಎಂಬ ಸಾಧನ ಗ್ರಂಥಾವಲಿಯ ಮೊದಲನೇ ಪುಸ್ತಕವನ್ನು ಅಲ್ಲಲ್ಲಿ ಓದಿ ನೋಡಿದೆವು. ಆತ್ಮನ ಅಸಂಗತ್ವವನ್ನೂ, ಕರ್ತೃತ್ವಾದಿಗಳು ಉಪಾಧಿ ಮೂಲಕವಾಗಿ ತೋರುವದನ್ನೂ, ಆತ್ಮಾನಾತ್ಮಗಳ ತಾದಾತ್ಮ್ಯಾಧ್ಯಾಸವನ್ನೂ, ಬಹು ಮಾರ್ಮಿಕ ರೀತಿಯಿಂದ ಇದರಲ್ಲಿ ವಿವರಿಸಿರುವರು. ಮಂದಾಧಿಕಾರಿಗಳಾದ ಜಿಜ್ಞಾಸುಗಳಿಗೆ ಕೂಡ ಸುಲಭರೀತಿಯಿಂದ ಆತ್ಮತತ್ವದ ಪರೋಕ್ಷಬೋಧವಾಗುವಂತೆ ಉಪನಿಷತ್ತುಗಳ ರಹಸ್ಯವನ್ನು ಚನ್ನಾಗಿ ಸ್ಫುಟೀಕರಣ ಮಾಡಿದ್ದನ್ನು ನೋಡಿ ತುಂಬಾ ಸಂತೋಷವೆನಿಸುತ್ತದೆ. ಈ ಪುಸ್ತಕವು ಅಧ್ಯಾತ್ಮಪ್ರೇಮಿಗಳಿಗೆ ಸಂಗ್ರಾಹ್ಯವೆಂದು ನಮ್ಮ ಅಭಿಪ್ರಾಯವಿದೆ.

ಬ್ರ. ದತ್ತಾತ್ರಯ ದೀಕ್ಷಿತ ಇವರು ಯೋಜಿಸಿರುವ ತ್ರೈಮಾಸಿಕ ಪರಮಾರ್ಥಸಾಧನೆಯ ವಿಷಯವನ್ನು ತಿಳಿದೆ. ಸಾಧನವಿಷಯವೂ, ಅಲ್ಲಿ ನಡೆಯುವ ಇಂಥ ಪ್ರವಚನಾದಿಗಳೂ ಸಹ ಬಹು ಸಂತೋಷಕರವಾದ ಸಂಗತಿಯು.

ಧಾರವಾಡ, ಶಕೆ ೧೮೬೧ ಭಾ. ಶು. ೧೪ **ವಿದ್ವನ್ಮಣಿ—ನಾಗೇಶಶಾಸ್ತ್ರಿ**

# ಮೊದಲು ಮಾತು

ಕೆಲವೊಂದು ಕಾರಣದ ಮೂಲಕ ಕಾರವಾರದ ಶ್ರೀ ಬಾಡಮಠಕ್ಕೆ ಹೋದಾಗ, ಅಲ್ಲಿ ತ್ರೈಮಾಸಿಕ ಪರಮಾರ್ಥ ಸಾಧನೆಯಲ್ಲಿ ತೊಡಗಿದ ಸಾಧಕರ ಮುಂದೆ ಮಾಡಿದ ಪ್ರವಚನಗಳ ಸಾರಾಂಶವನ್ನು ವಾಚಕರ ಮುಂದೆ ಇಟ್ಟಿರುತ್ತೇನೆ. ಹೀಗೆ ಇವುಗಳನ್ನು ಅಚ್ಚು ಹಾಕಿಸಿ ಪ್ರಕಟ ಪಡಿಸಿದರೆ ನೆಟ್ಟಗಾಗುವದೆಂದು ಶ್ರೀ ಶಿವಾನಂದ ನೂನು ಬಂಕಾಪುರದ ಇವರು ನನಗೆ ಬಲವಂತ ಮಾಡಿದ್ದರಿಂದ ಇವು ಬೆಳಕಿಗೆ ಬರುವ ಯೋಗವು ಬಂತು. ಈ ಪುಸ್ತಕದ ಪ್ರಕಟನೆಯಿಂದ ಯಾರಿಗಾದರೂ ಏನಾದರೂ ಲಾಭವಾದರೆ ಅವರು ಶ್ರೀ ಶಿವಾನಂದ ನೂನು, ದತ್ತಮೂರ್ತಿಗಳಿಗೆ ಋಣಿಯಾಗಬೇಕು.

ಪ್ರವಚನಗಳನ್ನು ಹೇಳಬೇಕೆಂಬ ಸಿದ್ಧತೆಯಿಂದಲೇ ಮಾಡಿದ ಪ್ರವಚನಗಳಿವಲ್ಲ. ಅಲ್ಲಿ ಅವರ ಆಗ್ರಹದ ಮೂಲಕ ಇವುಗಳನ್ನು ಹೇಳಿ ಕೊಡುವ ಪ್ರಸಂಗಬಂತು. ಇಲ್ಲಿ ಹೇಳಿರುವ ಕೆಲವು ವಿಷಯಗಳ ವಿಷಯವಾಗಿ ನಾನು ಈ ಮೊದಲು ಎಂದೂ ವಿಚಾರ ಮಾಡಿರಲಿಲ್ಲ. ಅಲ್ಲಿ ಪ್ರವಚನವನ್ನು ಹೇಳುವ ಕಾಲಕ್ಕೆ ಕೆಲವು ವಿಷಯಗಳು ಅಕಸ್ಮಾತ್ತಾಗಿ ನನ್ನ ಲಕ್ಷ್ಯಕ್ಕೆ ಬಂದು ನನ್ನ ಬಾಯಿಂದ ಹೊರಬಿದ್ದವು. ನನ್ನದೇಹ ಬರಿಯ ಪಂಜರದಂತಾಗಿತ್ತು. ಶ್ರೀ ಬಾಡಮಠದ ಪವಿತ್ರ ವಾತಾವರಣದ ಪ್ರಭಾವದಿಂದಲೇ ಹೀಗಾಯಿತೆಂದು ನನಗೆ ಎನಿಸದೆ ಹೋಗಲಿಲ್ಲ. ಆದುದರಿಂದ ಈ ಪ್ರವಚನಗಳನ್ನು ಶ್ರೀ ಪದ್ಮನಾಭ ಮಹಾರಾಜರಿಗೇ ಸಮರ್ಪಿಸಿರುವೆನು. ಅವರ ಕೃಪೆಯಿಂದಲೇ ಸಿಕ್ಕ ಪದಾರ್ಥಗಳನ್ನು ಅವರಿಗೇ ಸಮರ್ಪಿಸಿ ಪುಣ್ಯಪಡಕೊಳ್ಳುವ ಯೋಗ ವನ್ನು ಯಾವನು ಕಳೆದುಕೊಂಡಾನು? ಇದರೊಳಗಿನ ದೋಷಗಳೆಲ್ಲ ನನ್ನವು. ಗುಣಗಳೆಲ್ಲ ಶ್ರೀ ಮಹಾರಾಜರವು.

ಇನ್ನು ಮುಂದಿನ "ಬ್ರಹ್ಮ ಅಹಮಸ್ಮಿ" ಎಂಬ ಮಹಾವಾಕ್ಯಕ್ಕೆ ಸಂಬಂಧಿಸಿದ ವಿಷಯವನ್ನು ಮತ್ತೊಂದು ಪ್ರಸಂಗದಲ್ಲಿ ವಿಚಾರಿಸೋಣ.

೮-೧-೧೯೩೯ } ಕುಲಕರ್ಣಿ ನಾರಾಯಣರಾಯ
ಬೈಲಹೊಂಗಲ

ಪ್ರವಚನಕಾರರಾದ



ಸಚ್ಚಿದಾನಂದ ಪರಾಯಣ

ಕುಲಕರ್ಣಿ ನಾರಾಯಣರಾಯರು

# ಯೋಗೀಶ್ವರನ ಉಪಾಸ್ಯ



ಶ್ರೀದತ್ತ ಶ್ರೀಪಾದವಲ್ಲಭ ಶ್ರೀನೃಸಿಂಹಸರಸ್ವತಿ ಮಹಾರಾಜರಲ್ಲಿ
ಐಕ್ಯವನ್ನು ಹೊಂದಿದ ಶ್ರೀಮತ್ ಪದ್ಮನಾಭತೀರ್ಥರಿಗೆ—

# ವೇದಾಂತದ ಒಳದಾರಿ

-(ಕೇನೋಪನಿಷತ್ತಿನ ಆಧಾರದಿಂದ ಹೇಳಿದ್ದು)-



**ಶಂಕರಂ ಶಂಕರಾಚಾರ್ಯಂ ಕೇಶವಂ ಬಾದರಾಯಣಂ ।**
**ಸೂತ್ರಭಾಷ್ಯಕೃತೌ ವಂದೇ ಭಗವಂತೌ ಪುನಃಪುನಃ ॥**



.... ೧

ಶ್ರೀಮತ್ಪರಮಹಂಸ ಶ್ರೀಪದ್ಮನಾಭತೀರ್ಥ ಸ್ವಾಮಿಯವರಿಂದ ಸ್ಥಾಪಿತವಾದ ಈ ಮಠದ ಆವಾರದೊಳಗೆ ನಡೆದ ನಿಮ್ಮ ತ್ರೈಮಾಸಿಕ ಸಾಧನೆಯ ಕಾರ್ಯಕ್ರಮವನ್ನು ನೋಡಿ, ನನ್ನ ಮನಸಿಗೆ ಬಲು ಸಂತೋಷವಾಯಿತು. ಇಲ್ಲಿ ನೀವಿರುವ ವಾತಾವರಣ, ಇರುವ ಪದ್ಧತಿ, ಪ್ರತಿದಿನದ ನಿತ್ಯ ಕ್ರಮಗಳು ಮತ್ತು ಅನುಸರಿಸುತ್ತಿರುವ ಸಾಧನದ ರೀತಿಗಳನ್ನು ನೋಡಿದರೆ ನನಗೆ ಉಪನಿಷತ್ಕಾಲದ ಋಷಿಗಳ ಆಶ್ರಮದ ನೆನಪು ಆಗುತ್ತದೆ. ಇಲ್ಲಿಯ ಈ ಪವಿತ್ರ ವಾತಾವರಣದಲ್ಲಿ ಪರಮಾತ್ಮ ಪ್ರಾಪ್ತಿಗಾಗಿ ಸಾಧನ ಮಾಡುತ್ತಿರುವ ನಿಮ್ಮನ್ನು ನೋಡಿದರೆ ಯಾರಿಗಾದರೂ ಹರುಷವಾಗದಿರದು. ಈ ಕಾರ್ಯಕ್ರಮದ ಪ್ರತಿಷ್ಠಾಪಕರಾದ ಶ್ರೀಯೋಗೀಶ್ವರ-ದತ್ತಮೂರ್ತಿಯವರು ನಿಜವಾಗಿಯೂ ನಮ್ಮೆಲ್ಲರ ಮೇಲೆ ದೊಡ್ಡ ಉಪಕಾರವನ್ನು ಮಾಡಿದ್ದಾರೆ. ಅವರನ್ನು ನಾವು ಎಷ್ಟು

ಸ್ತುತಿಸಿದರೂ ಕಡಿಮೆಯೇ. ಪರಮಾರ್ಥಕ್ಕೆ ತೀರ ವಿಪರೀತವಾಗಿರುವ ಈ ಕಾಲದಲ್ಲಿ ಇಷ್ಟು ಧೈರ್ಯದಿಂದ ಎರಡನೆಯವರ ಸಲಹೆ-ಸಹಾಯಗಳ ಮೇಲೆ ಭರವಸೆ ಇಡದೆ ಕೇವಲ ನಿಸ್ವಾರ್ಥಬುದ್ಧಿಯಿಂದ ಪರಮಾರ್ಥ ಪ್ರಚಾರವನ್ನು ಮಾಡುತ್ತಿರುವ ಶ್ರೀ. ದತ್ತಾತ್ರೇಯದೀಕ್ಷಿತರ ಸಾಹಸವು ಬಲು ದೊಡ್ಡದು. **ಪರಮಾರ್ಥಶಾಸ್ತ್ರವು ಅನುಭವಶಾಸ್ತ್ರವಾಗಿದೆ.** ಅದರ ಸತ್ಯಾಸತ್ಯತೆಗಳನ್ನು ಪರೀಕ್ಷಿಸಬೇಕೆನ್ನುವವರು-ಅಶ್ರದ್ಧೆಯಿಂದಲೇ ಆಗಲೊಲ್ಲದೇಕೆ-ಪ್ರತ್ಯಕ್ಷ ಪ್ರಯೋಗಗಳನ್ನು ಮಾಡಲಿಕ್ಕೆ ಸಿದ್ಧರಾಗಬೇಕು. ನಿರ್ವಿಕಾರಬುದ್ಧಿಯಿಂದ ಸಾಧನ ಮಾಡಲೆಳಿಸುವ ಸಾಧಕರಿಗೆ ಪರಮಾರ್ಥದ ಅನುಭವವನ್ನು ಇಂದಿಗೂ ತಂದುಕೊಡುವದು ಶಕ್ಯವಿದೆ-ಎಂದು ಜಗತ್ತಿನ ಜನರಿಗೆ ಅವರು ತಮ್ಮೆರಡೂ ಕೈಗಳನ್ನು ಮೇಲಕ್ಕೆತ್ತಿ ಸಾರುತ್ತಿರುವರು. **ಇಂದಿನ ನಾಸ್ತಿಕರಿಗೆ ಮತ್ತು ಸಾಶಂಕಿತರಾದ ಆಸ್ತಿಕರಿಗೆ ಅವರು ಒಂದು ರೀತಿಯಿಂದ ಜಾಹೀರ ಆಹ್ವಾನವನ್ನೇ ಕೊಟ್ಟಿರುವರೆಂದು ಹೇಳಬಹುದು.** ಆತ್ಮವಿಶ್ವಾಸದ ಗಟ್ಟಿ ತಳಹದಿಯ ಮೇಲೆ ನಿಂತಿರುವ ಅವರ ಪ್ರಯತ್ನಕ್ಕೆ ದೇವರು ಯಶಸ್ಸು ಕೊಟ್ಟೇ ತೀರುವನೆಂಬ ನಂಬಿಗೆಯು ನನ್ನಲ್ಲಿ ಬಲವಾಗಿದೆ.

ಈ ತ್ರೈಮಾಸಿಕ ಸಾಧನೆಯಲ್ಲಿ ಭಾಗ ವಹಿಸುವವರು ಮೂರು ತಿಂಗಳ ವರೆಗೆ ತಾತ್ಪೂರ್ತಿಕ ಸಂನ್ಯಾಸವನ್ನು ಆಶ್ರಯಿಸಬೇಕಾಗುವದೆಂದು ಜಾಹೀರು ಮಾಡಲಾಗಿದೆ. ನೀವೆಲ್ಲ ಸಾಧಕರು ಅಂತಹ ಸಂನ್ಯಾಸವನ್ನು ಸ್ವೀಕರಿಸಿ ಇಲ್ಲಿಯ ಅಖಂಡಾಶ್ರಮದ ಕಷ್ಟನಷ್ಟಗಳಿಗೆ ಸ್ವಸಂತೋಷದಿಂದ ಒಳಪಟ್ಟು, ನಿಷ್ಠಾನು ಪರಮಾರ್ಥಸಾಧನೆಯನ್ನು ಮಾಡುವದನ್ನು ನೋಡಿದರೆ, ನೀವೆಲ್ಲರೂ ಧನ್ಯರೇ ಎಂಬುವದನ್ನು ಬೇರೆ ಹೇಳಬೇಕಾದುದಿಲ್ಲ. ಪರಮಾರ್ಥ ತತ್ವವು ಕೇಳಲಿಕ್ಕೆ ಕೂಡ ಸಿಕ್ಕುವದು ಬಲು ಕಠಿಣವೆಂದು ಕಠೋಪನಿಷತ್ತು ಹೇಳುತ್ತದೆ. ಆದುದರಿಂದ ಎರಡನೆಯವರು ನಮಗೇನೆಂಬುವರೆಂಬುದನ್ನು ನಾವು ವಿಚಾರಿಸುವ ಅವಶ್ಯಕತೆ ಇಲ್ಲ. ಇಲ್ಲಿ ಹೇಳಿಕೊಟ್ಟಿರುವ ಸಾಧನವನ್ನು ಚಾಚೂ ಬಿಡದೆ ಅನು

ಸುಸಿ, ಅದರಿಂದ ಲಾಭವಾಯಿತೋ ಇಲ್ಲವೋ ಎಂಬದನ್ನು ಸಮಷ್ಟಿಕ್ಕೆ ನಾನೇ ನಿಶ್ಚಯಿಸಬೇಕು.

ನಮ್ಮೆಲ್ಲರಿಗೂ ಪೂಜ್ಯರಾಗಿ ಈಗ ಬ್ರಹ್ಮೀಭೂತರಾಗಿರುವ ಶ್ರೀಮತ್ ಪರಮಹಂಸ ಶ್ರೀಪದ್ಮನಾಭ ಮಹಾರಾಜರೇ ಈ ಎಲ್ಲ ಕಾರ್ಯಕ್ರಮದ ಉತ್ಪಾದಕರೆಂದು ಶ್ರೀ. ದೀಕ್ಷಿತರು ಹೇಳುತ್ತಾರೆ. ಆ ಮಹಾರಾಜರ ಪ್ರೇರಣೆಯಿಂದಲೇ ಈ ಕಾರ್ಯಕ್ರಮವನ್ನು ಕೈಕೊಳ್ಳಲಾಗಿರುವದೆಂದು ಇದರ ಅರ್ಥವು. ತ್ರ್ಯಕ್ಷರೀ ಜಪಯಜ್ಞದ ಪೂರ್ತತೆಗೆಂದು ಈ "ಕ್ಯಾಂಪು" ಸುರುವಾಗಿರುತ್ತದೆ. ಅದರ ಇತಿಹಾಸವೆಲ್ಲ ನಿಮಗೆ ಗೊತ್ತೇ ಇರುವದರಿಂದ ಆ ಬಗ್ಗೆ ನನಗೇನೂ ಹೆಚ್ಚು ಹೇಳತಕ್ಕದ್ದಿರುವದಿಲ್ಲ. ಸದ್ಯಕ್ಕೆ ನಾನು ಹೇಳಬಯಸುವದೆಂದರೆ ಇಷ್ಟೇ; ಈ ಕಾರ್ಯಕ್ರಮದ ಎಲ್ಲ ಶ್ರೇಯಸ್ಸೂ ಶ್ರೀಪದ್ಮನಾಭ ಮಹಾರಾಜರಿಗೇ ಸಲ್ಲತಕ್ಕದ್ದು. ಅವರ ಪ್ರೇರಣೆಯಿಂದ ಸುರುವಾದ ಈ ಕೆಲಸವು ಅವರ ಮಠದಲ್ಲಿಯೇ, ಅವರ ಅಖಂಡಾಶ್ರಮದಲ್ಲಿಯೇ, ಅವರ ಸ್ವಂತ ಅಧ್ಯಕ್ಷತೆಯ ಕೆಳಗೇ ನಡೆದಿರುವದು. ಅವರು ಎಲ್ಲ ಕೆಲಸಗಳನ್ನು ನಮಗೆ ತಿಳಿಯದಂತೆ ನಿಂತು ನೋಡುತ್ತಿರುವರು. ನಮಗೆ ಅವರ ಆಶ್ರಯವಿದೆ, ಆಶೀರ್ವಾದವಿದೆ, ಸ್ಫೂರ್ತಿಯಿದೆ, ಸಹಾಯವಿದೆ, ಅವರ ಮೇಲ್ವಿಚಾರಣೆಯ ಬಲವಿದೆ. ಅವರೇ ಶ್ರೀದತ್ತಮೂರ್ತಿಗಳಾಗಿ ಈ ಕೆಲಸವನ್ನು ಏರ್ಪಡಿಸಿರುವರು. ಸಾಧಕರಾಗಿ ಸಾಧನ ಮಾಡುತ್ತಿರುವರು. ಸಾಧನದಿಂದ ಸಿದ್ಧಿಯನ್ನು ಹೊಂದತಕ್ಕವರೂ ಅವರೇ. ನನ್ನ ಬಾಯಿಯಿಂದ ಈಗ ಮಾತಾಡುತ್ತಿರುವವರೂ ಅವರೇ, ನಿಮ್ಮ ಕಿವಿಯಿಂದ ಕೇಳುತ್ತಿರುವವರೂ ಅವರೇ, ಹೀಗೆ ಎಲ್ಲವೂ ಪದ್ಮನಾಭಮಯವಾಗಿದೆ. ಅವರನ್ನು ಬಿಟ್ಟು ಇನ್ನೊಂದು ಪದಾರ್ಥವಾದರೂ ಜಗತ್ತಿನಲ್ಲಿ ಇರುವದೆ? ಈ ತತ್ವವನ್ನು ಕಂಡು ಹಿಡಿಯುವದಕ್ಕಾಗಿಯೇ ನಾವೆಲ್ಲರೂ ಕೂಡಿ ಈಗ ವಿಚಾರಮಾಡಬೇಕಾಗಿದೆ.

ಇಷ್ಟೆಲ್ಲ ಪ್ರಯತ್ನವನ್ನು ನಾವು ಮಾಡುವದು ಏತಕ್ಕಾಗಿ? ಮೋಕ್ಷಕ್ಕಾಗಿ, ಎಂದು ನೀವು ಸಹಜವಾಗಿಯೇ ಉತ್ತರ ಕೊಡಬಹುದು. ಆದರೆ ಮೋಕ್ಷವೇನೆಂಬುವದನ್ನು ಚನ್ನಾಗಿ ತಿಳಿದುಕೊಳ್ಳುವದು ಅವಶ್ಯಕವಿದೆ. ಮೋಕ್ಷವೆಂದರೆ ಇಂದ್ರನ ಸ್ವರ್ಗಲೋಕದಲ್ಲಾಗಲಿ, ಬ್ರಹ್ಮನ ಸತ್ಯಲೋಕದಲ್ಲಾಗಲಿ, ವಿಷ್ಣುವಿನ ವೈಕುಂಠದಲ್ಲಾಗಲಿ, ಅಥವಾ ಶಂಕರನ ಕೈಲಾಸದಲ್ಲಾಗಲಿ, ಇಲ್ಲವೆ ಬೇರೆ ಯಾವದಾದರೊಂದು ಲೋಕದಲ್ಲಾಗಲಿ ಇದ್ದುಕೊಂಡು ಎಂದೆಂದಿಗೂ ಸುಖವನ್ನು ಅನುಭವಿಸುತ್ತಿರುವದೆಂದು ಯಾರೂ ತಿಳಿದುಕೊಳ್ಳಬಾರದು. ಪರಮಾರ್ಥದೃಷ್ಟಿಯಿಂದ ನೋಡಿದರೆ ಲೋಕಗಳ ಕಲ್ಪನೆಯೇ ಹುಚ್ಚುತನದ್ದೆಂದು ಸಿದ್ಧವಾಗದಿರದು. ಹಾಗೆಯೇ ಸಾರೂಪ್ಯ, ಸಾಲೋಕ್ಯ, ಸಾಮೀಪ್ಯ ಅಥವಾ ಸಾಯುಜ್ಯಗಳಲ್ಲಿ ಒಂದಾದರೂ ಮೋಕ್ಷವಾಗಲಾರದು. ಇಂತಹ ಕಡಿಮೇ ತರದ ಸಾಧ್ಯಗಳೆಲ್ಲ ಉಪಾಸಕರಿಗೆ ಮಾತ್ರ ಸಿಕ್ಕತಕ್ಕಂಥವು. ವೇದಾಂತದ ಅಭಿಪ್ರಾಯದಂತೆ ಇಂತಹ ಗತಿಗಳೆಲ್ಲ ತೀರ ಗೌಣವೇ. **ಜ್ಞಾನದಿಂದ ಸ್ವರೂಪಸ್ಥಿತಿಯನ್ನು ಹೊಂದುವದೇ ವೇದಾಂತಕ್ಕೆ ಸಮ್ಮತವಾದ ಮೋಕ್ಷವು.** ಅದನ್ನು ಪಡೆಯುವದಕ್ಕಾಗಿ ಎಲ್ಲಿಗಾದರೂ ಹೋಗಬೇಕೆಂಬುವದಾಗಲಿ ಅಥವಾ ಅದನ್ನು ಎಲ್ಲಿಂದಾದರೂ ಎತ್ತಿಕೊಂಡು ಬರಬೇಕೆಂಬುವದಾಗಲಿ ಸರಿಯಾದುದಲ್ಲ. ಮೋಕ್ಷ, ಮುಕ್ತಿ, ನಿಃಶ್ರೇಯಸ ಅಥವಾ ಬಿಡುಗಡೆಯು ನಮ್ಮ ಸ್ವರೂಪವೇ ಆಗಿದೆ. ಎಂದರೆ ನಾವು ಕೇವಲ ಆನಂದರೂಪರಾಗಿಯೂ, ಎಂದೆಂದಿಗೂ ದುಃಖದ ಸ್ಪರ್ಶವಿಲ್ಲದವರಾಗಿಯೂ ಇರುವೆವು. ಇದನ್ನೇ ಕೆಲವು ವೇದಾಂತಿಗಳು ಬೇರೆ ಶಬ್ದಗಳಲ್ಲಿ ಹೇಳುವದುಂಟು. ಅತ್ಯಂತ ದುಃಖಾಭಾವವೂ ಮತ್ತು ನಿರತಿಶಯ ಸುಖಪ್ರಾಪ್ತಿಯೂ ಯಾವ ಸ್ಥಿತಿಯಲ್ಲಿ ದೊರೆಯುವವೋ ಅದನ್ನು

ಹೊಂದುವದೇ ಮೋಕ್ಷವು. ಅದು ಏನೇ ಇರಲಿ, ನಾವು ಸ್ವಭಾವತಃ ಮುಕ್ತರಾಗಿ, ದುಃಖರಹಿತರಾಗಿ, ಆನಂದರೂಪರಾಗಿದ್ದರೂ ದುಃಖಿಗಳಾಗಿ ರುವೆನೆಂದು ತಪ್ಪುತಿಳುವಳಿಕೆಯನ್ನು ಹಿಡಿದುಕೊಂಡಿದ್ದೇವೆ. ಎಂತೆಯೇ ನಾವು ಸುಖಕ್ಕಾಗಿ ಬೇರೆ ಕಡೆಗೆ ಹುಡುಕಾಡಹತ್ತಿದ್ದೇವೆ. ಮತ್ತು ಮೃಗಜಲದಂತೆ ಸಂಸಾರದ ಬೆನ್ನುಹತ್ತಿ ಬಳಲಿ ಬೆಂಡಾಗಿದ್ದೇವೆ. ಹೀಗೆ ಸಂಸಾರದ ಸರಿಯಾದ ಸ್ವರೂಪವನ್ನು ತಿಳಿದುಕೊಂಡು ನಮ್ಮ ಸ್ವರೂಪ ವನ್ನು ಹೊಂದುವದೇ ಮೋಕ್ಷವೆಂಬುದು ನಿರ್ವಿವಾದವಾಗಿದೆ.

ಮೋಕ್ಷದ ಆಶೆಯು ಸ್ವಾಭಾವಿಕವಾಗಿದೆ. ಪ್ರತಿಯೊಂದು ಪ್ರಾಣಿಯು ತನಗೆ ಸುಖವು ಸಿಕ್ಕಬೇಕೆಂತಲೂ ದುಃಖವು ದೂರಾಗ ಬೇಕೆಂತಲೂ ಸ್ವಾಭಾವಿಕವಾಗಿಯೇ ಇಚ್ಛಿಸುತ್ತದಷ್ಟೇ ? ಇಂತಹ ಸ್ಥಿತಿ ಯನ್ನು ಆತ್ಯಂತಿಕವಾಗಿ ಹೊಂದುವದೇ ಮೋಕ್ಷವೆಂದು ಮೇಲೆ ಹೇಳಿ ದ್ದೇವೆ. ಆದುದರಿಂದ 'ನೀನು ಮೋಕ್ಷವನ್ನು ಇಚ್ಛಿಸು' ಎಂದು ಯಾರೂ ಯಾರಿಗೂ ಹೇಳುವ ಕಾರಣವಿಲ್ಲ. **ಎಲ್ಲರಿಗೂ ಮೋಕ್ಷವು ಸ್ವಭಾವತಃ ಬೇಕೇ ಆಗಿರುತ್ತದೆ.** ಆದರೆ ಜನರು ಅದರ ಪ್ರಾಪ್ತಿಗಾಗಿ ಅನುಸರಿಸುವ ಉಪಾಯಗಳು ಮಾತ್ರ ಭಿನ್ನಭಿನ್ನವಾಗಿ, ವಿಪರೀತವಾಗಿರುವವು. ಎಂತೆಯೇ ಮೋಕ್ಷಹೊಂದುವ ಜನರೂ ಕಡಿಮೆಯೇ. ತುಪ್ಪದ ವಾಸ ನೆಯು ಮೇಲಿಂದ ತುಪ್ಪದ ಪಾತ್ರೆಯನ್ನೇ ಹುಡುಕಾಡುವ ಬೆಕ್ಕಿನಂತೆ, ಸಂಸಾರದಲ್ಲಿ ಸುಖದ ವಾಸನೆಯೇನೋ ಬರುತ್ತದೆ. ಆದರೆ ಅದರ ಮೇಲಿಂದ ಸುಖದ ಮೂಲವನ್ನೇ ನಾವೆಲ್ಲರೂ ಹುಡುಕಾಡಹತ್ತಿದ್ದರೂ ನಮಗದು ಸಿಕ್ಕಲೊಲ್ಲದಾಗಿದೆ.

**ಬರೇ ವಿಶ್ವಾಸ, ಪ್ರಾಮಾಣಿಕತನ, ಸತತ ಪ್ರಯತ್ನಗಳು ಇದ್ದರೆ ಸಾಕೆಂದು ಕೆಲವು ಜನರ ತಿಳುವಳಿಕೆಯಿದೆ. ಆದರೆ ಅದು ತಪ್ಪು.** ಪುಣೆಗೆ ಹೋಗಬೇಕೆಂಬ ಉತ್ಸಾಹದಿಂದ ಒಬ್ಬ ತರುಣನು ಒಳ್ಳೇ ಸಾಹಸದಿಂದ ದಿನಾಲೂ ೨೦-೨೫ ಮೈಲು ನಡೆಯುತ್ತಾನೆಂದು ಕಲ್ಪಿಸುವ. ಅವನಲ್ಲಿ ವಿಶ್ವಾಸವಿದೆ, ಉತ್ಸಾಹವಿದೆ, ಸಾಮರ್ಥ್ಯವಿದೆ,

ಸತತ ಪ್ರಯತ್ನವಿದೆ. ಆದರೂ ಅವನು ಪುಣೆಯ ದಾರಿಯನ್ನು ಬಿಟ್ಟು ಬೆಂಗಳೂರ ದಾರಿಯನ್ನು ಹಿಡಿದರೆ ಅವನು ತನ್ನ ಸಾಧ್ಯವನ್ನೆಂದಾದರೂ ಪಡೆಯಬಹುದೇ? ಎಂದಿಗೂ ಇಲ್ಲ. ಹೀಗೆಯೇ ಮೋಕ್ಷಕ್ಕಾಗಿಯೇ ಎಲ್ಲ ಜನರೂ ಒಂದೇ ಸವನೆ ಪ್ರಯತ್ನಬಡುತ್ತಿದ್ದರೂ ಯಾರಿಗೂ ಅದು ಸಿಕ್ಕದಂತಾಗಿದೆ. ಇದೆಲ್ಲದರ ಸಾರಾಂಶವೇನೆಂದರೆ: **ಮೋಕ್ಷಾಪೇಕ್ಷಿಯು ಸರಿಯಾದ ಮಾರ್ಗವನ್ನು ಹಿಡಿಯುವದೇ ಅತ್ಯಂತ ಮಹತ್ವದ ಸಂಗತಿಯು.** ಸರಿಯಾದ ಸಾಧನವು ಸಿಕ್ಕಮೇಲೆ ಅದನ್ನು ಶ್ರದ್ಧೆಯಿಂದಲೇ ಅನುಸರಿಸಬೇಕೆಂಬ ಅವಶ್ಯಕತೆಯೇನೂ ಇಲ್ಲ. **ಶ್ರದ್ಧೆಯಿಂದಾಗಲಿ, ಅಶ್ರದ್ಧೆಯಿಂದಾಗಲಿ, ಆ ಸಾಧನವನ್ನು ಮಾಡಿದರೆ ಸಾಕು.** ಸಾಧಕನು ಆ ಸಾಧನದಿಂದ ಸಿಕ್ಕಬೇಕಾದ ಸಾಧ್ಯವನ್ನು ಮುಟ್ಟಿಯೇ ತೀರುವನು. ಎಂತೆಯೇ ಶ್ರೀದತ್ತಮೂರ್ತಿಗಳು "ಶ್ರದ್ಧೆಯಿಂದಲಾದರೂ ಬನ್ನಿ, ಅಶ್ರದ್ಧೆಯಿಂದಲಾದರೂ ಬನ್ನಿ, ಮೋಕ್ಷವು ಸಾಧ್ಯವಿದೆ" ಎಂದು ತಮ್ಮ ಪ್ರಕಟನೆಯಲ್ಲಿ ಜಾಹೀರಪಡಿಸಿದ್ದಾರೆ. ತಮಗೆ ಗೊತ್ತಿರುವ ಸಾಧನವು ಅಷ್ಟು ಸರಿಯಾದುದೆಂಬ ಭರವಸೆಯು ಅವರಿಗುಂಟು. ತನ್ನ ಸಾಧನದಲ್ಲಿ ತನಗೇ ವಿಶ್ವಾಸವಿಲ್ಲದ ಹೇಡಿಗಳ ಬಾಯಿಂದ ಇಂತಹ ಮಾತುಗಳು ಎಂದಾದರೂ ಹೊರಡಬಹುದೇ?

ನಿಮಗಿಲ್ಲಿ ಶ್ರೀ. ದೀಕ್ಷಿತರು ಹೇಳಿಕೊಟ್ಟಿರುವ ಸಾಧನೆಯನ್ನು ನಾನು ಸೂಕ್ಷ್ಮವಾಗಿ ಪರಿಶೀಲಿಸಿದ್ದೇನೆ. ಅದರ ಬಗ್ಗೆ ಅಭಿಪ್ರಾಯ ಕೊಡಲಿಕ್ಕೆ ಬೇಕಾಗುವಷ್ಟು ಯೋಗ್ಯತೆಯು ನನ್ನಲ್ಲಿಲ್ಲದಿದ್ದರೂ ಅದನ್ನು ನೋಡಿ ನನಗೆನಿಸಿದ ಮಾತುಗಳನ್ನು ಹೇಳದಿರುವಷ್ಟು ಪುಕ್ಕತನವೂ ನನ್ನಲ್ಲಿರುವದಿಲ್ಲ. ಇಲ್ಲಿಯ ಸ್ಥಿತಿಗತಿಗಳನ್ನೆಲ್ಲ ನೋಡಿದರೆ, **ನೀವು ಅನುಸರಿಸುತ್ತಿರುವ ಮಾರ್ಗವು ತೀರ ಶಾಸ್ತ್ರಶುದ್ಧವಾದುದೆಂದು ನನಗೆನಿಸುತ್ತದೆ.** ನಿಮಗೆ ಈ ಮಾತನ್ನು ಕೇಳಿ ಸಂತೋಷವಾಗುವದೆಂದೂ, ಹೊಸ ಹುರುಪು ಬರುವದೆಂದೂ ನಾನು ನಂಬಿದ್ದೇನೆ. ಪರಮಾರ್ಥ ಮಾರ್ಗದಲ್ಲಿ ಮೂರು ಸಂಗತಿಗಳು ಕೂಡಬೇಕೆಂದು ಶ್ರೀಮಚ್ಛಂಕರ

ಭಗವತ್ಪಾದರವರು ಹೇಳಿರುತ್ತಾರೆ. (೧) ವೇದಾಂತದ ಆಧಾರವು ಮೊದಲನೆಯದು. ಎಂದರೆ ನಾವು ಅನುಸರಿಸುತ್ತಿರುವ ಮಾರ್ಗವು ಶಾಸ್ತ್ರವಿಹಿತವಾದುದಾಗಿಯೂ, ನಮಗೆ ಬರುವ ಅನುಭವಗಳು ಶಾಸ್ತ್ರದಲ್ಲಿ ವರ್ಣಿಸಲ್ಪಟ್ಟಂತಹವಾಗಿಯೂ ಇರಬೇಕಾದುದು ಆವಶ್ಯಕವು ಇಲ್ಲದೇ ಬರೇ ಅನುಭವವನ್ನೇ ಮುಖ್ಯವಾಗಿಟ್ಟುಕೊಂಡರೆ ಹುಚ್ಚನ ಅನುಭವಕ್ಕೂ ಪ್ರಾಮಾಣ್ಯ ಬರಬೇಕಾದೀತು. (೨) ನಮ್ಮ ಮಾರ್ಗವು ಸತ್ ಸಂಪ್ರದಾಯಕ್ಕೆ ಸೇರಿದ್ದ ಆತ್ಮನಿಷ್ಠ ಗುರುವಿನಿಂದ ಬಂದದ್ದಾಗಿರಬೇಕು. ಮತ್ತು ನಮಗೆ ಬರುವ ಅನುಭವಗಳು ಅವನಿಗೆ ಸಮ್ಮತವಾಗಿರಬೇಕು. (೩) ಕೊನೆಯದಾಗಿ ಆ ಮಾರ್ಗದಿಂದ ಹಿಡಿದು ನಡೆದ ನಮಗೆ ಆ ಅನುಭವಗಳು ಅಲ್ಲಲ್ಲಿಗೆ ಅವಶ್ಯವಾಗಿ ಬಂದೇ ತೀರಬೇಕು. **ವೈಯಕ್ತಿಕ ಅನುಭವ, ಗುರುವಿನ ಸಮ್ಮತಿ ಮತ್ತು ಶಾಸ್ತ್ರದ ಆಧಾರಗಳು ಒಂದೇ ಕಡೆಗೆ ಕೂಡಿದಾಗ ಮಾತ್ರ ಪರಮಾರ್ಥದ ಅನುಭವವಾಯಿತೆಂದು ನಂಬಬಹುದು.**

ಈ ರೀತಿಯಿಂದ ವಿಚಾರ ಮಾಡಿದರೆ ಶ್ರೀ ಯೋಗೀಶ್ವರ ದತ್ತಮೂರ್ತಿಗಳು ಶ್ರೀಪದ್ಮನಾಭ ಮಹಾರಾಜರ ಶುದ್ಧ ಸಾಂಪ್ರದಾಯಕ್ಕೆ ಸೇರಿದವರಾಗಿಯೂ ಗುರುಗಳ ಅನುಗ್ರಹವನ್ನು ಪಡೆದವರಾಗಿಯೂ ಇರುತ್ತಾರೆ. ಅವರನ್ನು ನೀವು ಗುರುಗಳೆಂದು ಸ್ವೀಕರಿಸಬೇಕೋ ಬಾರದೋ ಎಂಬುದನ್ನು ನಾನು ಹೇಳುವದಿಲ್ಲ. ಅದು ನಿಮ್ಮ ನಿಮ್ಮ ಪ್ರಶ್ನೆಯು. ಆದರೆ ಅವರಾದರೂ ತಮ್ಮನ್ನು ಗುರುಗಳಾಗಿ ತಿಳಿಯಬೇಕೆಂದು ಎಂದೂ ಹೇಳಿರುವದಿಲ್ಲ. "ನಾವು ಹೇಳುವ ಸಾಧನ ಮಾರ್ಗವಾದರೂ ಸರಿಯಾಗಿರುವದೋ ಇಲ್ಲವೋ ಎಂಬದನ್ನು ಪರೀಕ್ಷಿಸುವದಕ್ಕಾಗಿಯಾದರೂ ಶ್ರದ್ಧೆಯಿಂದ ಅಥವಾ ಅಶ್ರದ್ಧೆಯಿಂದ ಪ್ರಯೋಗ ಮಾಡಿ ನೋಡಿರಿ" ಎಂದು ನಿರ್ದಾಕ್ಷಿಣ್ಯವಾಗಿಯೂ ಧೈರ್ಯದಿಂದಲೂ ಅವರು ಹೇಳಿರುತ್ತಾರಷ್ಟೇ? ಇಂತಹ ಕಾಲದಲ್ಲಿ ಹೀಗೆ ಹೇಳುವ ಜನರು ಸಿಕ್ಕುವದೇ ಅಪರೂಪ. ಅಂಥವರ ಸಹಾಯದಿಂದ ಶ್ರೀಪದ್ಮನಾಭ

ಮಹಾರಾಜರ ಮೇಲ್ವಿಚಾರಣೆಯಲ್ಲಿ ಮಹಾರಾಜರ ಅಖಂಡಾಶ್ರಮ ದಲ್ಲಿಯೇ ಸಾಧನ ಮಾಡುವ ಸಂಧಿಯು ನಿಮಗೆ ಸಿಕ್ಕದ್ದು ನಿಮ್ಮ ಪರಮ ಭಾಗ್ಯವೇ ಸರಿ. ಇಂತಹ ಸಮಯಗಳು ಆಯುಷ್ಯದಲ್ಲಿ ದೊರೆ ಯುವದು ಬಲು ಕಷ್ಟ. ದೊರೆತ ಸಮಯದ ಸರಿಯಾದ ಉಪಯೋಗ ವನ್ನು ಮಾಡಿಕೊಳ್ಳದವರಂತೂ ತೀರ ದುರ್ಭಾಗ್ಯರು. ಈ ನಿಮ್ಮ ಸಾಧ ನೆಯ ಲಾಭವನ್ನು ಇಲ್ಲಿಯ ಇನ್ನೂ ಹಲವು ಜನರಿಗೆ ತೆಗೆದುಕೊಳ್ಳು ವದು ಸುಲಭವಿದ್ದರೂ, ಶಕ್ಯವಿದ್ದರೂ, ಅವರ ದುರ್ದೈವದಿಂದಲೇ ಅವರಿಗೆ ಆ ಬುದ್ಧಿಯುಂಟಾಗಲಿಲ್ಲವೆಂದು ನಾನು ತಿಳಿಯುತ್ತೇನೆ. ಆ ಜನರು ಮುಂದೆ ಪಶ್ಚಾತ್ತಾಪ ಪಡದಿರಲಾರರೆಂದು ಎದೆ ತಟ್ಟಿ ಹೇಳಬಲ್ಲೆ.

ಈಗ ನೀವು ಹಿಡಿದಿರುವ ದಾರಿಯು ಕೇನೋಪನಿಷತ್ತಿನಲ್ಲಿ ಇರುವ ದೆಂದಿಷ್ಟು ಹೇಳಿದರೆ ಸಾಕು. ನಿಮ್ಮ ಸಾಧನವು ಶಾಸ್ತ್ರಶುದ್ಧವಾದು ದೆಂದು ನಿಮಗೆ ಅದರಿಂದ ನಿಶ್ಚಯವಾಗದಿರದು. ಕೇನೋಪನಿಷತ್ತು ತೀರ ಚಿಕ್ಕ ಉಪನಿಷತ್ತು. ಉಪನಿಷತ್ತುಗಳೆಂದರೆ ಬ್ರಹ್ಮಜ್ಞಾನದ ರಹಸ್ಯವನ್ನು ತಿಳಿಸಿಕೊಡುವ ಗ್ರಂಥಗಳು. ಅದರಿಂದುಂಟಾಗುವ ಜ್ಞಾನದಿಂದ ಸಂಸಾರಬಂಧನವು ಸಡಿಲವಾಗಿ ಕೊನೆಗೆ ಸಮೂಲವಾಗಿ ನಾಶವಾಗುವದು. ಬ್ರಹ್ಮಪ್ರಾಪ್ತಿಯಾಗುವದೂ ಆ ಜ್ಞಾನದಿಂದಲೇ. ಇವೆಲ್ಲ ಅಂಶಗಳು "ಉಪನಿಷತ್ತೆಂಬ" ಹೆಸರಿನಲ್ಲಿ ಅಡಕವಾಗಿರುವವು. ಇಂತಹ ಫಲಗಳಿಂದ ಯುಕ್ತವಾದ ರಹಸ್ಯಮಯ ಜ್ಞಾನವನ್ನು ಹೇಳಿ ಕೊಡುವದರಿಂದ ಆ ಪುಸ್ತಕಗಳಿಗೂ, "ಉಪನಿಷತ್ತೆಂಬ" ಹೆಸರೇ ಬಂದಿರುವದು. ಉಪನಿಷತ್ತುಗಳಿಗೆ ವೇದಾಂತವೆಂಬ ಬೇರೆ ಹೆಸರೂ ಉಂಟು. ವೇದಾಂತವೆಂದರೆ ವೇದದ ಕೊನೆಯ ಭಾಗವೆಂದೂ ವೇದದ ಹೃದಯವೆಂದೂ ಅರ್ಥವು. ಈ ಎರಡೂ ಅರ್ಥಗಳು ವೇದಾಂತಗಳಿಗೆ ಹತ್ತುತ್ತವೆ. ಉಪನಿಷತ್ತುಗಳು ವೇದದ ಕೊನೆಯ ಭಾಗವೂ ಅಹುದು. ವೇದದ ಮುಖ್ಯ ಹೃದಯವೆಲ್ಲ, ಅವುಗಳ ಸಿದ್ಧಾಂತವೆಲ್ಲ, ಅವುಗಳ ನಿಶ್ಚಿತಾರ್ಥವೆಲ್ಲ ಬಂದಿರುವದೂ ಈ ಉಪನಿಷತ್ತುಗಳಲ್ಲಿಯೇ.

ಉಪನಿಷತ್ತುಗಳ ಸಾಂಪ್ರದಾಯವೇ ಸಾಂಪ್ರದಾಯವು. ಅದು ಒಂದೇ ನಮಗೆ ಪ್ರಮಾಣವು. ಹಿಂದೂ ಜನರ ಜೀವನವೆಲ್ಲ, ಪರಮಾರ್ಥವೆಲ್ಲ ಅವುಗಳ ಮೇಲೆಯೇ ಅವಲಂಬಿಸಿರುತ್ತದೆ. ಆದರೆ ದುರ್ದೈವದಿಂದ ಉಪನಿಷತ್ ಸಾಂಪ್ರದಾಯವು ಈಗ ವಿಚ್ಛಿನ್ನವಾಗಿ ಹೋಗಿದೆ. ಆ ಕಾಲದ ಉಪಾಸನೆಗಳೂ, ವಿದ್ಯೆಗಳೂ, ಜ್ಞಾನಸಾಂಪ್ರದಾಯವೂ ಈಗ ಸಂಪೂರ್ಣವಾಗಿ ಮಾಯವಾಗಿ ಹೋಗಿವೆ. ಉಪನಿಷತ್ತುಗಳ ಸ್ಥಳದಲ್ಲಿ ತೀರ ಕೀಳಾದ ಪುಸ್ತಕಗಳು ಪ್ರಮಾಣಭೂತವಾಗಿ ಕುಳಿತಿವೆ. ಶುದ್ಧ ವೇದಾಂತ ಸಾಂಪ್ರದಾಯವು ಲುಪ್ತವಾಗಿ, ಅದರ ಸ್ಥಳದಲ್ಲಿ ವೇದಾಂತದ ಹೆಸರಿನಿಂದ ವೇದಾಂತದ ಅಪಪ್ರಚಾರವಾಗಹತ್ತಿದೆ. ಎಂತೆಯೇ ವೇದಾಂತದ ಮೇಲಿನ ಜನರ ವಿಶ್ವಾಸವೂ ಶ್ರದ್ಧೆಯೂ ಹಾರಹತ್ತಿವೆ. ವೇದಾಂತದಿಂದಲೇ ನಮ್ಮ ರಾಷ್ಟ್ರದ ಅವನತಿಯಾಯಿತೆಂದೂ, ವೇದಾಂತದ ನಿರಾಶಾವಾದವು ರಾಷ್ಟ್ರೀಯ ಜೀವನಕ್ಕೆ ಘಾತುಕವಾದುದೆಂದೂ, ಅತ ಏವ ತ್ಯಾಜ್ಯವೆಂದೂ ಹಲವು ಜನರು ತಿಳಿಯುತ್ತಾರೆ. ಇದಕ್ಕೆಲ್ಲ **ನಿಜವಾದ ವೇದಾಂತದ ಅಭಾವವಷ್ಟೇ ಅಲ್ಲದೆ, ಅಪಪ್ರಚಾರವೂ ಕಾರಣವಾಗಿದೆ.** ನಿಜವಾಗಿ ನೋಡಿದರೆ ವೇದಾಂತವು ಮನುಷ್ಯನ ಜೀವಾಳವು. ವೇದಾಂತವನ್ನು ಬಿಟ್ಟು ಯಾವ ವಿಚಾರಿಯೂ ಬದುಕಿರಲಾರನು. ವೇದಾಂತವೇ ಮನುಷ್ಯತ್ವದ ಲಕ್ಷಣವು. ಕಿಂಬಹುನಾ **ವೇದಾಂತಿಯೇ ಮನುಷ್ಯನು, ಮನುಷ್ಯನೇ ವೇದಾಂತಿಯು.** ವೇದಾಂತವಿಲ್ಲದ ಮಾನವ ಜೀವನವು ಪಶುಜೀವನವು. ವೇದಾಂತವನ್ನರಿಯದ ಮನುಷ್ಯನು ಇದ್ದೂ ಇಲ್ಲದಂತೆಯೇ ಸರಿ. ಯಾಕೆಂದರೆ ಮಾನವನ ಉತ್ಪತ್ತಿ ಸ್ಥಿತಿ ಲಯಗಳನ್ನೂ, ಅವನ ಧ್ಯೇಯ ಸಾಧನೆಗಳನ್ನೂ ಕುರಿತು ಮಾಡಲ್ಪಟ್ಟಿರುವ ಉದಾತ್ತ ವಿಚಾರಗಳೇ ವೇದಾಂತಗಳು. ಅವುಗಳನ್ನರಿಯದ ಮನುಷ್ಯನು ಮನುಷ್ಯನಾಗಬಹುದೇ?

ವೇದಾಂತದ ಶುದ್ಧ ಸಾಂಪ್ರದಾಯವು ನಷ್ಟವಾಗಿ, ಅದರ ಅಪ ಪ್ರಚಾರವಾಗಲಿಕ್ಕೆ ಇನ್ನೂ ಒಂದು ಕಾರಣವುಂಟು. ಧರ್ಮದ ಸೂತ್ರ ಗಳೆಲ್ಲ ಸ್ವಾರ್ಥಿಗಳ ಕೈಯಲ್ಲಿ ಸಿಕ್ಕಾಗ, ಸಾಮಾನ್ಯ ಜನರನ್ನೆಲ್ಲ ಧರ್ಮದ ವಿಷಯಕವಾದ ಅಜ್ಞಾನದಲ್ಲಿಡುವದೇ ಅವರ (ಆ ಸ್ವಾರ್ಥಿಗಳ) ಧ್ಯೇಯ ವಾಗಿ ಬಿಟ್ಟಿತು. ಎಂತೆಯೇ ಉಪನಿಷತ್ತುಗಳ ಅಭ್ಯಾಸಕ್ಕೆ ಬಹುಜನ ಸಮಾಜವೆಲ್ಲ ಅಯೋಗ್ಯವೆಂಬ ಅಪಸಿದ್ಧಾಂತವು ಹೊರಟಿತು. ಅದನ್ನೇ ನಾವು ಹಲವು ಶತಮಾನಗಳ ವರೆಗೆ ನಂಬುತ್ತ ಬಂದಿರುವದರಿಂದ ಅದು ಈಗ ಪ್ರಮಾಣವಾಗಿ ಕುಳಿತಿದೆ. ಆದರೆ ಇದು ಸರಿಯಾದ ತಿಳುವಳಿಕೆ ಯಲ್ಲ. **ವೇದಾಂತವು ನಿರಪವಾದವಾಗಿ ಮನುಷ್ಯಮಾತ್ರರನ್ನೆಲ್ಲ ಉದ್ದೇಶಿಸಿ ಅಸ್ತಿತ್ವದಲ್ಲಿ ಬಂದಿರುವದು.** ವೇದಾಂತದ್ದು ಶುದ್ಧ ಜ್ಞಾನ ಸಾಂಪ್ರದಾಯವಿದ್ದು, ಅದಕ್ಕೆ ಎಲ್ಲರೂ ಹಕ್ಕುದಾರರು. ಅಲ್ಲಿ ಕುಲ, ಗೋತ್ರ, ಜಾತಿ, ಲಿಂಗ, ಪಂಥ, ವಯಸ್ಸು ಮೊದಲಾದ ಯಾವ ಕಿರುಕುಳ ಕಲ್ಪನೆಗಳಿಗೂ ಆಸ್ಪದವಿಲ್ಲ. ಜ್ಞಾನವನ್ನು ಬೀಗದಲ್ಲಿಟ್ಟು ಸ್ವಾರ್ಥಸಾಧಿಸುವ ದಿವಸಗಳು ಕಳೆದುಹೋಗಿವೆ. ಜ್ಞಾನವನ್ನು ಮುಚ್ಚಿಡುವ ಹವ್ಯಾಸವೇ ಗರ್ಹಣೀಯವಾದುದು. ಇಷ್ಟೇ ಅಲ್ಲ; ಜಾತಿ ಪಂಥ ಮೊದಲಾದ ಎಲ್ಲ ಕಲ್ಪನೆಗಳನ್ನು ಬಿಟ್ಟವನಿಗೇ ಪರಮಾರ್ಥವು ದಕ್ಕುವಂತಹದು. ಇದರ ಅರ್ಥವು ವ್ಯವಹಾರದಲ್ಲಿ ಸಂಕರ ಮಾಡ ಬೇಕೆಂಬುವದೇನೂ ಅಲ್ಲ. ವ್ಯವಹಾರಿಕ ತಾರತಮ್ಯಗಳು ವ್ಯಾವಹಾರದ ಪೂರ್ತೆ ಮಾತ್ರ ಬೇಕಾಗತಕ್ಕವು. ಆದರೆ ಅವುಗಳಿಗೆ ಪರಮಾರ್ಥದಲ್ಲಿ ಸ್ಥಾನವಿಲ್ಲವೆಂಬುದಿಷ್ಟೇ ನನ್ನ ಅಭಿಪ್ರಾಯವು.

ಆತ್ಮಸಾಕ್ಷಾತ್ಕಾರವೇ ಮೋಕ್ಷವೆಂದು ಮೇಲೆ ಹೇಳಿದ್ದಾಯಿತು. ಆತ್ಮನೆಂದರೆ ನಮ್ಮೆಲ್ಲರ ನಿಜವಾದ ಸ್ವರೂಪವೇ. ಆದುದರಿಂದ ನಮ್ಮ ಸ್ವರೂಪವನ್ನರಿತುಕೊಳ್ಳಲಿಕ್ಕೆ ನಮಗೆಲ್ಲರಿಗೂ ಅಧಿಕಾರವುಂಟು. ನಮ್ಮನ್ನೇ ನಾವು ಅರಿತುಕೊಳ್ಳಬಾರದೆಂದು ಯಾರಿಗಾದರೂ ಹೇಳುವ ಶಕ್ತಿಯುಂಟಾದೀತೇ? ಆತ್ಮತತ್ವವನ್ನು ಅರಿಯುವ ಅಧಿಕಾರವು ಯಾರಿ

ಗಾದರೂ ಇರುವದೋ ಇಲ್ಲವೋ, ಎಂಬ ಪ್ರಶ್ನೆಯೇ ಹುಟ್ಟುವದಿಲ್ಲ. ಅದು ನಮ್ಮ ಸ್ವಭಾವವು, ಸ್ವರೂಪವು, ಅದನ್ನು ಅಲ್ಲಗಳೆಯುವ ಶಕ್ತಿಯು ದೇವತೆಗಳಿಗೂ ಕೂಡ ಇಲ್ಲವೆಂದು ಬೃಹದಾರಣ್ಯಕೋಪನಿಷತ್ತು ಹೇಳುತ್ತದೆ. **ಎಂತೆಯೇ ಉಪನಿಷತ್ ಸಾಂಪ್ರದಾಯವೊಂದೇ ಮಾತ್ರ ಇಡೀ ಮಾನವ ಜನಾಂಗಕ್ಕೆಲ್ಲ ಸಾಮಾನ್ಯ ಸಾಂಪ್ರದಾಯವಾಗಬಹುದಾದ ಸಾಮರ್ಥ್ಯವುಳ್ಳದಾಗಿದೆ.** ಮುಸಲ್ಮಾನರಿಗೆ ಇಸ್ಲಾಮವು, ಕ್ರೈಸ್ತರಿಗೆ ಕ್ರಿಸ್ತಿಧರ್ಮವು, ಬೌದ್ಧರಿಗೆ ಬೌದ್ಧಧರ್ಮವು, ಪಾರ್ಸಿಗಳಿಗೆ ಪಾರ್ಸೀಧರ್ಮವು—ಹೀಗೆ ಒಂದೊಂದು ವಿಶಿಷ್ಟ ಪಂಥದವರಿಗೆ ಮಾತ್ರ ಆಯಾ ಧರ್ಮಗಳು ಅಸ್ತಿತ್ವದಲ್ಲಿ ಬಂದಿವೆ. ಆದರೆ ಮನುಷ್ಯಮಾತ್ರರಿಗೆಲ್ಲ ಉಪನಿಷತ್ ಸಾಂಪ್ರದಾಯವು ಆಸರವನ್ನು ಕೊಟ್ಟು ಎಲ್ಲರಸ್ನೂ ಸಮಾನವಾಗಿಯೇ ಉದ್ಧಾರ ಮಾಡುವ ಅಭಯ ವಚನವನ್ನು ಕೊಡುತ್ತದೆ.

ಮೋಕ್ಷಕ್ಕೆ ಎಲ್ಲರೂ ಅಧಿಕಾರಿಗಳಾಗಿರುವಂತೆ, ಅದನ್ನು ಸಂಪಾದಿಸುವದೂ ಎಲ್ಲರಿಗೆ ಶಕ್ಯಇದೆ. ತಿರುಗಿ ಕೇಳಿದರೆ ಅಷ್ಟು ಸುಲಭವಾದ ಮಾತೇ ಮತ್ತೊಂದಿರುವದಿಲ್ಲೆಂದು ಹೇಳಬಹುದು. ಆದರೆ **ತೀವ್ರ ವೈರಾಗ್ಯ** ಮತ್ತು **ದೃಢವಾದ ಜಿಜ್ಞಾಸೆಗಳು** ಮಾತ್ರ ಅವಶ್ಯವಾಗಿ ಬೇಕು, ತತ್ತ್ವಜ್ಞಾನಕ್ಕೆ ನಮಗೆ ಏನಾದರೂ ಅಡ್ಡಬರುತ್ತಿದ್ದರೆ ಅವುಗಳ ಅಭಾವವೇ ಸರಿ. ಮನಸಿನಲ್ಲಿ ಏನಾದರೊಂದು ಸಾಂಸಾರಿಕ ವಾಸನೆಯನ್ನಿಟ್ಟುಕೊಂಡು ಪರಮಾರ್ಥ ವಿಚಾರ ಮಾಡುವವನಿಗೆ ಎಂದಿಗೂ ತತ್ತ್ವಜ್ಞಾನವಾಗಲಾರದು. ಈ ಮಾತನ್ನು ಸಾಧಕರು ಬಲು ಚನ್ನಾಗಿ ಲಕ್ಷದಲ್ಲಿಡಬೇಕು. ನಮಗೆ ಮೇಲೆ ಮೇಲೆ ಏನೂ ವಾಸನೆಗಳಿಲ್ಲವೆಂದು ಎನಿಸುತ್ತಿದ್ದರೂ, ಯೋಗ್ಯ ಪ್ರಸಂಗವು ಬಂದೊಡನೆ ಅವು ಪ್ರಕಟವಾಗುತ್ತವೆ. ಅಲ್ಲಿಯ ವರೆಗೆ ನಮ್ಮ ಇಚ್ಛೆ, ವಾಸನೆ ಅಥವಾ ಕಾಮನೆಗಳು ಸುಪ್ತವಾಗಿರುತ್ತವೆ. ಆದರೆ ಸುಪ್ತವಾದ ಮಾತ್ರಕ್ಕೆ ಅವು ಇಲ್ಲದಂತಾಗಿ ಹೋದವೆಂದು ಯಾರೂ ತಿಳಿಯಬಾರದು. ಸರಿಯಾದ ಪ್ರಸಂಗವು ಬರುವ ವರೆಗೆ ಆಯಾ ವಾಸನೆಗಳು ನಮ್ಮಲ್ಲಿ ಇರುವವೆಂಬ

ಅರಿವೂ ನನಗಿರುವದಿಲ್ಲ. ಎಂತಲೇ **ವೇದಾಂತದಲ್ಲಿ ಆತ್ಮಪರೀಕ್ಷಣೆ ಗಿಂತ ಹೆಚ್ಚಿನ ಸಾಧನವೇ ಇಲ್ಲವೆಂದು ಹೇಳಿದ್ದಾರೆ.** ಜಿಜ್ಞಾಸೆ ಯೆಂದರೆ ತತ್ತ್ವವನ್ನೇ ಯಥಾರ್ಥವಾಗಿ ತಿಳಿದುಕೊಳ್ಳಬೇಕೆಂಬ ಉತ್ಕಟ ವಾದ ಇಚ್ಛೆ. ಜಿಜ್ಞಾಸೆ ಇಲ್ಲದಿದ್ದವನ ಮುಂದೆ ಜ್ಞಾನವನ್ನು ಹೇಳುತ್ತ ಕೂಡುವದೇ ದಡ್ಡತನವು. ಹೇಳಿದರೂ ಏನೂ ಉಪಯೋಗಲಾರದು.

ವೇದಾಂತಕ್ಕೆ ಅಧಿಕಾರಿ ಯಾರು? ಎಂಬ ಪ್ರಶ್ನೆಯನ್ನು ಕುರಿತು ಚರ್ಚಿಸುವಾಗ 'ಸಾಧನಚತುಷ್ಟಯ ಸಂಪತ್ತಿ'ಯ ವರ್ಣನೆಯನ್ನು ಕೊಡುವದುಂಟು. (೧) ನಿತ್ಯಾನಿತ್ಯ ವಸ್ತುವಿವೇಕ ಅಥವಾ ಆತ್ಮಾನಾತ್ಮ ವಿಚಾರ, (೨) ವೈರಾಗ್ಯ, (೩) ಶಮ, ದಮ, ಉಪರತಿ, ಶ್ರದ್ಧಾ, ತಿತಿಕ್ಷಾ ಮತ್ತು ಸಮಾಧಾನಗಳೆಂಬ ಆರು ಗುಣಗಳ ಸಂಪತ್ತಿ ಮತ್ತು (೪) ಮೋಕ್ಷಾಪೇಕ್ಷೆ. ಇವುಗಳ ಅರ್ಥವೇನೆಂಬುವದು ನಿಮಗೆಲ್ಲರಿಗೂ ಗೊತ್ತುಂಟು. ನಿಮಗೆ ಗೊತ್ತಿದ್ದ ಮಾತನ್ನೇ ಪುನಃ ಹೇಳುವದರಲ್ಲಿ ಅರ್ಥವಿಲ್ಲ. ಈ ನಾಲ್ಕರಲ್ಲಿ ಉಳಿದೆಲ್ಲ ಸದ್ಗುಣಗಳೂ ಅಡಕವಾಗುವ ವೆಂಬುದು ಸ್ಪಷ್ಟವಿದೆ. ಇವುಗಳ ಸ್ಫುಟವಾದ ಉಲ್ಲೇಖವು ಒಂದೇ ಕಡೆಗೆ ಉಪನಿಷತ್ತಿನಲ್ಲಿ ಎಲ್ಲಿಯೂ ಬಂದಿರುವದಿಲ್ಲ. ಆದರೆ ಇವು ಉಪ ನಿಷತ್ತುಗಳಲ್ಲಿ ಅಲ್ಲಲ್ಲಿಗೆ ಸೂಚಿಸಲ್ಪಟ್ಟಿರುತ್ತವೆ. ಸಾಧಕರಿಗೆ ಉಪನಿಷ ತ್ಕಾರರು ಅಲ್ಲಲ್ಲಿಗೆ ಸೂಚಿಸಿರುವ ಸಾಧನಗಳನ್ನು ಶ್ರೀಮಚ್ಛಂಕರ ಭಗವತ್ಪಾದರವರು ಒಂದೇ ಕಡೆಗೆ ಸುವ್ಯವಸ್ಥಿತವಾಗಿ ಕೂಡಿಸಿ ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ ಸಾಧನಚತುಷ್ಟಯ ಸಂಪತ್ತಿ ಎಂಬ ಹೆಸರಿನಿಂದ ಮಂಡಿಸಿದ್ದಾರೆ. ಇರಲಿ. ಇವೆಲ್ಲ ಸದ್ಗುಣಗಳು ಸಾಧಕನಲ್ಲಿ ಮೊದಲಿಗೇ ಸಂಪೂರ್ಣವಾಗಿಯೇ ಇರಬೇಕೆಂದು ಇದರ ಅರ್ಥವಲ್ಲ. ನಿಜವಾಗಿ ಹೇಳಬೇಕೆಂದರೆ: ಜ್ಞಾನಿಯಾದವನಲ್ಲಿ ಮಾತ್ರ ಇವು ಚನ್ನಾಗಿ ಕಂಡು ಬರುವವು. ಮೋಕ್ಷಾಪೇಕ್ಷೆಯು ಮಾತ್ರ ಜ್ಞಾನಿಯಲ್ಲಿರುವದು ಶಕ್ಯ ವಿಲ್ಲ. ಸಾರಾಂಶವೇನೆಂದರೆ–ಸಾಧಕನು ಈ ಸದ್ಗುಣಗಳನ್ನು ತನ್ನವನ್ನಾಗಿ ಮಾಡಿಕೊಳ್ಳಲಿಕ್ಕೆ ಪ್ರಯತ್ನಪಡುತ್ತಿರಬೇಕು. ಸಾಧಕನ ಪ್ರಗತಿ ಯಾದಂತೆ ಇವೂ ಹೆಚ್ಚು ಹೆಚ್ಚು ಸ್ಫುಟವಾಗುತ್ತ ಹೋಗುವವು.

ಮೇಲೆ ನಾವು ಜಿಜ್ಞಾಸೆಯೆಂದು ಕರೆದಿರುವದೂ, ಮೋಕ್ಷಾಪೇಕ್ಷೆಯೆಂಬುವದೂ ಒಂದೇ. ಸಾಧಕನಲ್ಲಿ ಇದೊಂದೇ ತೀರ ಪ್ರಬಲವಾಗಿಬಿಟ್ಟರೂ ಸಾಕು. ಉಳಿದ ಸಾಧನಗಳು ತಮ್ಮಷ್ಟಕ್ಕೆ ತಾವಾಗಿಯೇ ಬರುತ್ತವೆ. **ಪರಮಾತ್ಮತತ್ತ್ವವನ್ನು ತಿಳಿದುಕೊಂಡೇ ಬಿಟ್ಟೇನು—ಎಂಬ ದೃಢಸಂಕಲ್ಪವಿದ್ದರೆ ಉಳಿದ ಯಾವ ಸಂಗತಿಗಳೂ ಅವನನ್ನು ಅಡ್ಡಗಟ್ಟಲಾರವು.** ಈ ಮಾತನ್ನು ಸಾಧಕರು ಚನ್ನಾಗಿ ಲಕ್ಷ್ಯದಲ್ಲಿಡಬೇಕು. ಎಂತೆಯೇ ಬ್ರಹ್ಮಸೂತ್ರದ ಪ್ರಾರಂಭದಲ್ಲಿಯೇ ಶ್ರೀಮದ್ವ್ಯಾಸರು 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಹೇಳಿ ಜಿಜ್ಞಾಸೆಯ ಮಹತಿಯನ್ನೂ ಸಾಮರ್ಥ್ಯವನ್ನೂ ಸ್ಫುಟಗೊಳಿಸಿದ್ದಾರೆ. ಆದರೆ ಈ ಜಿಜ್ಞಾಸೆಯು ಕೇವಲ ಡಾಂಭಿಕತನಕ್ಕಾಗಿ ತೋರಿಸುವಂತಹದೂ, ತಾತ್ಪೂರ್ತಿಕವೂ ಆಗಿರಬಾರದು. ಅದೊಂದು ವ್ಯಸನವೇ ಆಗಿ ಬಿಡುವ ಮಟ್ಟಿಗೆ ಬೆಳೆದಿರಬೇಕು. ಪರಮಾರ್ಥವನ್ನು ಬಿಡಬೇಕೆಂದರೂ ಅದು ಅವನಿಗೆ ಸಾಧ್ಯವಾಗದಷ್ಟು ದೃಢವಾಗದ್ದಾಗಿರಬೇಕು. ಪರಮಾರ್ಥವು ಸಾಧಕನ ಹಂಬಲವಾಗಬೇಕು; ಅದು ಆವನದಾಗಬೇಕು; ಮಹಾರಾಷ್ಟ್ರ ಭಾಷೆಯಲ್ಲಿ ಹೇಳುವಂತೆ ಅದೊಂದು ಅವನಿಗೆ 'ಶೋಕ'ವಾಗಬೇಕು, 'ನಾದ' ವಾಗಬೇಕು. ಇಲ್ಲಿ 'ಶೋಕ'ವೆಂದರೆ ದುಃಖವಲ್ಲ; 'ನಾದ'ವೆಂದರೆ ಸಪ್ಪಳವಲ್ಲ. ಎರಡೂ ಶಬ್ದಗಳು ಒಂದೇ ಅರ್ಥವನ್ನು ತೋರಿಸುತ್ತವೆ. ಯಾವನೊಬ್ಬನಿಗೆ ಒಂದು ಸಂಗತಿಯ ಬಗ್ಗೆ ಸ್ವಾಭಾವಿಕವಾದ, ಅತ್ಯುತ್ಕಟವಾದ, ಎಂದೆಂದಿಗೂ ಬಿಡಲಿಕ್ಕೆ ಸಾಧ್ಯವಾಗದಂತಹ ಪ್ರೇಮವಿದ್ದಿತೆಂದರೆ ಅದನ್ನು ಈ ಶಬ್ದಗಳು ಸೂಚಿಸುತ್ತವೆ. ಉದಾಹರಣೆ—ಸಂಗೀತ ಶೋಕ ಅಥವಾ ನಾದ; ಅದರಂತೆಯೇ 'ಬಾಜಿ' ಎಂಬ ಮರಾಠೀ ಶಬ್ದದ ಅರ್ಥವು. ಎಂದರೆ ಮನುಷ್ಯನು 'ಪರಮಾರ್ಥಬಾಜಿ'ಯಾಗಬೇಕು. ಸಾರಾಂಶವೇನೆಂದರೆ— **ಪರಮಾರ್ಥ ಜಿಜ್ಞಾಸುವಿಗೂ, ಅತ್ಯಂತ ವಿಷಯಾಸಕ್ತನಾದ ಮನುಷ್ಯನಿಗೂ ಧ್ಯೇಯದ ಬಗ್ಗೆ ತೋರಿಸುತ್ತಿರುವ ಪ್ರೇಮದಲ್ಲಿ ಹೆಚ್ಚುಕಡಿಮೆ ಇರುವದಿಲ್ಲ.** ಆದರೆ ಅವರವರ

ಪ್ರೇಮದ ವಿಷಯಗಳು ಮಾತ್ರ ಹೆಚ್ಚುಕಡಿಮೆಯಾಗಿರುತ್ತವೆ. ಮನುಷ್ಯನು ತನ್ನ ಸಾಮಾನ್ಯ ವ್ಯಸನದ ಸಲುವಾಗಿ ಉಳಿದ ವಸ್ತುಗಳ ಬಗ್ಗೆ ವೈರಾಗ್ಯವನ್ನೂ, ವ್ಯಸನಪೂರ್ತಿಗಾಗಿ ಉತ್ಸಾಹ ಪ್ರೇಮಗಳನ್ನೂ, ಅದಕ್ಕಾಗಿ ಅಪಾರವಾದ ಕಷ್ಟನಷ್ಟಗಳನ್ನು ಸಹಿಸುವ ಸಿದ್ಧತೆಯನ್ನೂ ತೋರಿಸುವಂತೆ, ಪರಮಾರ್ಥದ ಸಲುವಾಗಿ ತೋರಿಸುವದನ್ನು ಕಲಿತು ಕೊಂಡು ಬಿಟ್ಟರೆ ಸಾಕು; ಕೃತಕೃತ್ಯನಾಗುವನು. ಅವರಿಬ್ಬರ ಧ್ಯೇಯ ಗಳಷ್ಟೇ ಭಿನ್ನ; ಮನಸಿನ ಸ್ಥಿತಿ ಮೊದಲಾದವುಗಳೆಲ್ಲ ಒಂದೇ. ಒಬ್ಬರಿಗೆ ಯಾವುದೊಂದು ವಿಷಯಸುಖ ಬೇಕಿದ್ದರೆ ಮತ್ತೊಬ್ಬನಿಗೆ ಪರಮಾತ್ಮನು ಬೇಕಾಗಿರುವನು. ಇದೇ ಭಾವವನ್ನು ಭಕ್ತ ಶ್ರೀ ಪ್ರಲ್ಹಾದನು ವಿಷ್ಣು ಪುರಾಣದಲ್ಲಿ ತೋರಿಸಿದ್ದಾನೆ. ಅವನು ಅಲ್ಲಿ ಪರಮಾತ್ಮನಿಗೆ ಬೇಡಿಕೊಳ್ಳು ವದೇನೆಂದರೆ—* "ತಿಳಿಗೇಡಿಗಳು ವಿಷಯಗಳ ಬಗ್ಗೆ ತೋರಿಸುವ ಸ್ವಾಭಾವಿಕ ಪ್ರೇಮವೇ ನನ್ನ ಹೃದಯದಲ್ಲಿ ಪರಮೇಶ್ವರನ ಬಗ್ಗೆ ಇರಲಿ.' ಆದುದರಿಂದ ಪರಮಾರ್ಥದ ಬಗ್ಗೆ ಇಂತಹ ಪ್ರಬಲವಾದ ಹಂಬಲವೊಂದೇ ಸಾಧಕನಲ್ಲಿರಬೇಕಾದ ಮುಖ್ಯ ಆವಶ್ಯಕತೆಯೆಂದು ಹೇಳಬಹುದು. ಇದಿಷ್ಟು ಇದ್ದರೆ ತೀರಿತು. ಉಳಿದವುಗಳ ಆವಶ್ಯಕತೆಯಿಲ್ಲ. ಅವು ತಾವಾಗಿಯೇ ಅನುಸರಿಸುತ್ತವೆ. ಭಾಗವತದಲ್ಲಿ ಶ್ರೀಪ್ರಲ್ಹಾದನೇ ಹೇಳಿದಂತೆ "ದ್ವಿಜಾತಿಯಾಗಲಿ, ದೇವತೆಗಳ ಜನ್ಮವಾಗಲಿ, ಋಷಿಯಾಗು ವದಾಗಲಿ, ಸದಾಚಾರವಾಗಲಿ, ಪಾಂಡಿತ್ಯವಾಗಲಿ, ದಾನವಾಗಲಿ, ತಪ ವಾಗಲಿ, ಯಜ್ಞಯಾಗಾದಿಗಳಾಗಲಿ, ಮಡಿ ಮಡಿಯೆಂದು ಹಾರಾಡುವ ದಾಗಲಿ, ಅಥವಾ ವ್ರತಗಳಾಗಲಿ ಪರಮಾತ್ಮ ಪ್ರಾಪ್ತಿಗೆ ಸಾಕಾಗ ಲಾರವು. ನಿಷ್ಕಾಮಭಕ್ತಿಯೊಂದರಿಂದಲೇ ಪರಮಾತ್ಮನು ಪ್ರಸನ್ನ ನಾಗುವನೇ ಹೊರತು ಉಳಿದ (ಮೇಲೆ ಹೇಳಿದ) ಸಂಗತಿಗಳೆಲ್ಲ ನಟನೆ

---

* ಯಾ ಪ್ರೀತಿರವಿವೇಕಾನಾಂ ವಿಷಯೇಷ್ವನಪಾಯಿನೀ ।
ತ್ವಾಮನುಸ್ಮರತಃ ಸಾ ಮೇ ಹೃದಯಾನ್ಮಾಪಸರ್ಪತು ॥

ಮಾತ್ರ"§. ನಿಷ್ಕಾಮಭಕ್ತಿಯೆಂದರೆ ಪರಮಾತ್ಮನಿಗಾಗಿ ಪರಮಾತ್ಮನು ಬೇಕೆಂಬ ಹಂಬಲವು. **ಸಗುಣ ವಿಚಾರ ಮಾಡುವಾಗ ವರ್ಣಿಸಲ್ಪಡುವ ಈ ನಿಷ್ಕಾಮ ಭಕ್ತಿಯೇ ನಿರ್ಗುಣ ವಿಚಾರದಲ್ಲಿ 'ನಿರ್ಮಲವಾದ ಜಿಜ್ಞಾಸೆ' ಎಂದು ಕರೆಯಲ್ಪಡುತ್ತದೆ.** ಅದೇ ಮುಖ್ಯವಾ ಸಂಗತಿಯೆಂದು ನಾವು ವರ್ಣಿಸಿರುವದು.

ಸಾಧಕನು ಇನ್ನೊಂದು ಸಂಗತಿಯ ಕಡೆಗೂ ತುಸು ಲಕ್ಷ್ಯಗೊಡತಕ್ಕದ್ದು. **'ನನ್ನ ಕಡೆಯಿಂದಾಗಲಾರದು' ಎಂಬ ಹೇಡಿತನದ ವೃತ್ತಿಯು ಮೋಕ್ಷಕ್ಕೆ ತೀರ ವಿಘ್ನಕಾರಿಯು.** ತನ್ನಲ್ಲಿಯೇ ತನಗೆ ನಂಬಿಗೆ ಇಲ್ಲದ ಹೇಡಿಯು ಯಾವುದೇ ಗುರುಗಳ ಅಥವಾ ದೇವರ ಕೃಪೆಯಿಂದ ಮೋಕ್ಷವಾದೀತೆಂಬ ಹುಚ್ಚು ನಂಬಿಗೆಯನ್ನಿಡುವದೇ ಬೇಡ. ಇಲ್ಲಿ ಇದೇ ಜನ್ಮದಲ್ಲಿ ತತ್ತ್ವಸಾಕ್ಷಾತ್ಕಾರವನ್ನು ಮಾಡಿಕೊಳ್ಳಲು ಬರುವಂತಿದೆ. ಈ ಬಗ್ಗೆ ಎಷ್ಟುಮಾತ್ರವೂ ಸಂದೇಹ ಬೇಡ. ಆತ್ಮವನ್ನರಿತವರ ಮನುಷ್ಯಜನ್ಮವೇ ಮಾತ್ರ ಸಾರ್ಥಕವಾದಂತಾಗುತ್ತದೆ. ಇಲ್ಲದಿದ್ದರೆ ನಮ್ಮ ಆಯುಷ್ಯವು ವ್ಯರ್ಥವಾಗಿ. ಹಾಳಾದಂತಾಗಿ, ದೊಡ್ಡ ಆಪತ್ತು ನಮ್ಮ ಮುಂದೆ ನಿಂತಿರುವದೆಂದು ಕೇನೋಪನಿಷತ್ತು ಸಾರಿ ಸಾರಿ ಹೇಳುತ್ತದೆ.

**ಇಹ ಚೇದವೇದೀದಥ ಸತ್ಯಮಸ್ತಿ**
**ನ ಚೇದಿಹಾ ವೇದೀನ್ಮಹತೀ ವಿನಷ್ಟಿಃ ।**

ನಾನೀಗ ನಿಮಗೆ ಹೇಳಬೇಕೆಂದಿರುವದು ಶುದ್ಧವಾದ ಜ್ಞಾನಸಾಂಪ್ರದಾಯವು. ಶ್ರೀಮತ್‌ಪರಮಹಂಸ ಶ್ರೀಪದ್ಮನಾಭ ಮಹಾ

---

§ ನಾಲಂ ದ್ವಿಜತ್ವಂ ದೇವತ್ವಂ ಋಷಿತ್ವಂ ವಾಸುರಾತ್ಮಜಾಃ ।
ಪ್ರೀಣನಾಯ ಮುಕುಂದಸ್ಯ ನ ವೃತ್ತಂ ನ ಬಹುಜ್ಞತಾ ॥
ನ ದಾನಂ ನ ತಪೋ ನೇಜ್ಯಾ ನ ಶೌಚಂ ನ ವ್ರತಾನಿ ಚ ।
ಪ್ರೀಯತೇಽಮಲಯಾ ಭಕ್ತ್ಯಾ ಹರಿರನ್ಯದ್ವಿಡಂಬನಮ್ ॥

**—ಭಾಗವತ, ಏಳನೆಯ ಸ್ಕಂಧ**

ರಾಜರದೂ ಇದೇ ಸಾಂಪ್ರದಾಯವು. ಅವರು ಆಚರಿಸಿ ನೋಡಿ, ಅಳೆದು ಉಳಿದು ಅದರ ಮಹತಿಯನ್ನು ಹಾಡಿದವರು. ಅದರ ಪ್ರಸಾರಕ್ಕಾಗಿಯೇ ಅವರು ತಮ್ಮ ಆಯುಷ್ಯವನ್ನು ಧಾರೆಯೆರೆದವರು. ಅದರಿಂದಲೇ ಅವರು ಸಿದ್ಧಿಯನ್ನು ಪಡೆದು ಮುಕ್ತರಾದವರು. ಇಂತಹ ಜ್ಞಾನಪ್ರಧಾನಸಾಂಪ್ರದಾಯದವರಾದ ಶ್ರೀಯೋಗೀಶ್ವರದತ್ತಮೂರ್ತಿಯವರೂ ಅದಕ್ಕನುಗುಣವಾದ ಸಾಧನವನ್ನೇ ಹೇಳದೆ ಇನ್ನೇನು ಹೇಳಬೇಕು? ಇಲ್ಲಿ ಉಪಾಸನೆಗೆ ಆಸ್ಪದವಿಲ್ಲ. **ಉಪಾಸನೆಯು ನಿರುಪಯುಕ್ತವೆಂದು ಇದರ ಅರ್ಥವಲ್ಲ. ಆದರೆ ಪರಮಾತ್ಮಪ್ರಾಪ್ತಿಗೆ ತೀರ ಸಮೀಪವಾದ, ನೀಟಾದ, ಒಳದಾರಿಯೆಂದರೆ ಜ್ಞಾನಮಾರ್ಗವೇ ಸರಿ.** ಆದರೆ ಯಾರ ಬುದ್ಧಿಗೆ ಇದು ಒಮ್ಮೆಲೇ ಹಿಡಿಯುವದಿಲ್ಲವೋ ಅವರು ಗುರುಗಳ ಅಪ್ಪಣೆಯಂತೆ ಯಥಾಶಾಸ್ತ್ರವಾದ ಉಪಾಸನೆಗಳನ್ನು ಮಾಡಿ ಮುಕ್ತರಾಗಬೇಕು.

ಆತ್ಮಜ್ಞಾನವಾಗಲಿಕ್ಕೆಂದು ಬೇರೆ ಬೇರೆಯವರು ಬೇರೆ ಬೇರೆ ದಾರಿ, ಪ್ರಕ್ರಿಯೆ, ಉಪಪತ್ತಿ ಅಥವಾ ವಿಚಾರಸರಣಿಗಳನ್ನು ಮುಂದೆ ಮಾಡುವದುಂಟು. ಆದರೆ ಆಯಾ ಪ್ರಕ್ರಿಯೆಗಳು ಸರಿಯಾದುವೋ ಅಲ್ಲವೋ ಎಂಬುವದನ್ನೇ ವಿಶೇಷವಾಗಿ ವಿಚಾರಿಸುತ್ತ ಕೂಡುವ ಕಾರಣವಿಲ್ಲ. **ಯಾರು ಯಾರಿಗೆ ಯಾವ ಯಾವ ಸಾಧನ ಅಥವಾ ಪ್ರಕ್ರಿಯೆಯಿಂದ ಆತ್ಮಜ್ಞಾನವಾಗುವದೋ ಅದೇ ಸಾಧನವು ಅವರವರಿಗೆ ಶ್ರೇಷ್ಠವಾದದ್ದೆಂದು ತಿಳಿಯಬೇಕೆಂದು** ಶ್ರೀ. ಸುರೇಶ್ವರಾಚಾರ್ಯರು* ಮುಕ್ತಕಂಠದಿಂದಲೇ ಹೇಳಿದ್ದಾರೆ. ಸಾಧನಗಳು ಮುಖ್ಯವಲ್ಲ. ಸಾಧ್ಯವೇ ಮುಖ್ಯವು. ಪರಮಾತ್ಮಜಿಜ್ಞಾಸುಗಳು ಬೇರೆ ಬೇರೆ ಯೋಗ್ಯತೆಯವರಿರುವದರಿಂದ ಗುರುಗಳು ಅವರವರ ಯೋಗ್ಯತೆಗನುಸರಿಸಿ ಅವರವರಿಗೆ ಬೇರೆ

---

* ಯಯಾ ಯಯಾ ಭವೇತ್ಪುಂಸೋ ವ್ಯುತ್ಪತ್ತಿಃ ಪ್ರತ್ಯಗಾತ್ಮನಿ ।
ಸಾ ಸೈವ ಪ್ರಕ್ರಿಯಾ ಜ್ಞೇಯಾ ಸಾಧ್ವೀ ಸಾ ಚಾನವಸ್ಥಿತಾ ॥

— **ವಾರ್ತಿಕ.**

ಬೇರೆ ಸಾಧನಗಳನ್ನು ಯೋಚಿಸಿ ಹೇಳಬೇಕಾಗುವದು. ಇದರಿಂದ ಆ ಸಾಧನಗಳ ಮಹತಿಯೂ ಕಡಿಮೆಯಾಗುವದಿಲ್ಲ. ಅಥವಾ ಅವು ಗಳೊಳಗೆ ಪರಸ್ಪರ ವಿರೋಧವೂ ಉಂಟಾಗುವ ಕಾರಣವಿಲ್ಲ. ಈ ದೃಷ್ಟಿ ಯಿಂದಲೇ ಮುಂದಿನ ಸಾಧನಕ್ರಮವನ್ನು ವಿಚಾರಿಸಬೇಕೆಂದು ಬಿನ್ನವಿಸುತ್ತೇನೆ.

---

 .... ೪

ಆತ್ಮಜ್ಞಾನದಿಂದಲೇ ಮೋಕ್ಷವು. ತತ್ತ್ವಜ್ಞಾನದ ಹೊರತು ಮೋಕ್ಷಕ್ಕೆ ಬೇರೊಂದು ಸಾಧನವಿಲ್ಲೆಂದು ವೇದವು ಸ್ಪಷ್ಟವಾಗಿ ಹೇಳು ತ್ತದೆ. ಆತ್ಮನೆಂದರೆ ನನ್ನ ಸ್ವರೂಪಭೂತವಾದ ವಸ್ತುವು. ಆದುದ ರಿಂದ ಅದನ್ನು ಬೇರೆ ಕಡೆಗೆ ಎಲ್ಲಿಯೂ ಹುಡುಕಲಿಕ್ಕೆ ಹೋಗುವ ಆವಶ್ಯಕತೆಯೂ ಇಲ್ಲ. ಅದು ಬೇರೆ ಕಡೆಗೆ ಸಿಕ್ಕುವದೂ ಶಕ್ಯವಿಲ್ಲ. ಈ ಮಾತನ್ನು ಸಾಧಕರು ಪದೇ ಪದೇ ನೆನಪಿನಲ್ಲಿಡಬೇಕು. **ಜ್ಞಾನವೆಂದರೆ ವಸ್ತುತಂತ್ರವಾದುದು, ಪುರುಷ ತಂತ್ರವಲ್ಲ;** ಎಂದರೆ ಯಾವ ಪದಾ ರ್ಥದ ಜ್ಞಾನಮಾಡಿಕೊಳ್ಳಬೇಕಾಗಿರುವದೋ ಅದರ ಯಥಾರ್ಥ ಜ್ಞಾನವೇ, ಅದನ್ನು ಇದ್ದಕ್ಕಿದ್ದಂತೆ ತಿಳಿದುಕೊಳ್ಳುವದೇ ಸರಿಯಾದ ಜ್ಞಾನವೆನಿಸುವದು. ಜ್ಞಾನವು ಪದಾರ್ಥಗಳ ಮೇಲೆ ಅವಲಂಬಿಸಿರು ವದೇ ವಿನಾ, ಉಳಿದ ಸಂಗತಿಗಳ ಮೇಲಲ್ಲ. **ಅಲ್ಲಿ ಭಾವನೆಯ ಪ್ರಶ್ನೆ ವಿಲ್ಲ.** ನಾನೊಂದು ಕುರ್ಚಿಯನ್ನು ನೋಡುತ್ತ, ಅದು ಕುರ್ಚಿಯಾಗ ಬಾರದೆಂದೂ, ಮಂಚವಾಗಬೇಕೆಂದೂ ಎಷ್ಟೇ ಭಾವನೆಮಾಡುತ್ತ ಕುಳಿ ತರೂ, ಅದು ಮಂಚವಾಗಲಾರದು. ಭಾವನೆಯ ಮೇಲೆ ಜ್ಞಾನವು ಅವಲಂಬಿಸಿದ್ದರೆ, ತನ್ನ ಪ್ರೀತಿಯ ಜನರನ್ನು ಕಳೆದುಕೊಂಡ ಅಸ್ತರು ಶವಗಳನ್ನೂ ಸಜೀವ ಮಾಡಬಹುದಾಗಿತ್ತು. ಭಾವನೆಯಿಂದ ಪದಾರ್ಥ

ಗಳನ್ನು ಸರಿಯಾಗಿ ತಿಳಿದುಕೊಳ್ಳದೆ ತಪ್ಪುಗ್ರಹಿಕೆಯನ್ನು ಮಾಡಿಕೊಂಡರೆ ಅದಕ್ಕೆ ಭ್ರಾಂತಿಯೆಂದೂ, ದಡ್ಡತನವೆಂದೂ ನಾವು ಕರೆಯುತ್ತೇವಲ್ಲದೆ, ಜ್ಞಾನವೆಂದು ಎಂದೂ ಕರೆಯುವದಿಲ್ಲ. **ಸರಿಯಾದ ಜ್ಞಾನವು ವಿಚಾರದಿಂದ ಹುಟ್ಟುತ್ತದೆ.** ಒಮ್ಮೆ ವಿಚಾರಮಾಡಹತ್ತಿದೆವೆಂದರೆ, **ಅದರಿಂದ ಜ್ಞಾನವು ಹುಟ್ಟಬಾರದೆಂದು ನಾವು ಎಷ್ಟೇ ಇಚ್ಛಿಸಿದರೂ, ಅದು ಹುಟ್ಟದೇ ಇರಲಾರದು.** ಉದಾ:- ಸೂರ್ಯನು ಪೃಥ್ವಿಯ ಸುತ್ತು ತಿರುಗುವನೆಂದು ನಮಗೆ ಪ್ರತ್ಯಕ್ಷವಾಗಿ ಕಾಣಿಸುತ್ತದಷ್ಟೇ! ಆದರೆ ಜ್ಯೋತಿಶ್ಶಾಸ್ತ್ರವನ್ನು ಅಭ್ಯಾಸಮಾಡಹತ್ತಿದೊಡನೆ ಪೃಥ್ವಿಯೇ ಸೂರ್ಯನ ಸುತ್ತು ತಿರುಗುವದೆಂದೂ, ಸೂರ್ಯನು ಸ್ಥಿರವಾಗಿರುವನೆಂದೂ ಜ್ಞಾನವು ಹುಟ್ಟದಿರಲಾರದು. ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕೆಂದು ಬಲ್ಲವರು ಹೇಳುವದು ಇದಕ್ಕಾಗಿಯೇ. ಜ್ಞಾನದ ಸಾಮರ್ಥ್ಯವೇ ಅಂತಹದು. ಅದು ವರ್ಷಗಟ್ಟಲೆಯಾಗಿ ಬೆಳೆಯುತ್ತ ಬಂದಿರುವ ವಿಪರೀತ ತಿಳವಳಿಕೆಗಳನ್ನೆಲ್ಲ ತನ್ನ ಒಂದೇ ಏಟಿನಿಂದ ಸಮೂಲವಾಗಿ ನಾಶಪಡಿಸುತ್ತದೆ. ಆದರೆ ಭಾವನೆ ಅಥವಾ ಉಪಾಸನೆಯು ಸಂಪೂರ್ಣವಾಗಿ ಕರ್ತೃತಂತ್ರವು. ಅಂದರೆ ಉಪಾಸನೆಗಳನ್ನು ಮಾಡುವದೂ, ಬಿಡುವದೂ, ಅಥವಾ ವಿಪರೀತವಾಗಿ ಮಾಡುವದೂ— ಎಲ್ಲವೂ ಉಪಾಸಕನ ಕೇವಲ ಇಚ್ಛೆಯ ಮೇಲೆಯೇ ಅವಲಂಬಿಸಿದೆ. ಜ್ಞಾನಕ್ಕೆ ವಿಚಾರಶಕ್ತಿಯೂ ಸಾರಾಸಾರ ವಿವೇಕವೂ ಅವಶ್ಯವಾಗಿ ಬೇಕು. ಆದರೆ ಉಪಾಸಕನಿಗೆ ಅದೇನೂ ಕಾರಣವಿಲ್ಲ. ಗುರುವಿನ ಮೇಲೆ ಶ್ರದ್ಧೆ ಅಥವಾ ವಿಶ್ವಾಸವನ್ನಿಟ್ಟರೆ ಸಾಕು. ಅಷ್ಟರಿಂದಲೇ ಉಪಾಸನೆಯು ಶಕ್ಯವಿದೆ. ಆದುದರಿಂದ ವಿಚಾರಮಾಡುವ ಶಕ್ತಿ ಇಲ್ಲದಿದ್ದವರೂ, ಇಚ್ಛೆ ಇಲ್ಲದಿದ್ದವರೂ, ಮಾತ್ರ ಯೋಗ್ಯ ಜನರ ಕಡೆಯಿಂದ ಉಪಾಸನಾ ಕ್ರಮಗಳನ್ನು ತಿಳಿದುಕೊಂಡು ಅನುಷ್ಠಾನ ಮಾಡುತ್ತ ಹೋಗಬೇಕು. **ಆದರೆ ಏನೇ ಆದರೂ ಜ್ಞಾನದ ದೃಷ್ಟಿಯಿಂದ ಉಪಾಸನೆಗೆ ಏಕಾಗ್ರತೆಯೂ ಜ್ಞಾನವನ್ನು ಸಂಪಾದಿಸಲಿಕ್ಕೆ ಬೇಕಾಗುವ ಯೋಗ್ಯತೆಯೂ ಫಲವಲ್ಲದೆ ಸಾಕ್ಷಾತ್ ಮೋಕ್ಷವಲ್ಲ.** ಜ್ಞಾನವು ಪ್ರಮಾಣಗಳಿಂದಲೇ

ಆಗಬೇಕಲ್ಲದೆ ಭಾವನೆಯಿಂದಲ್ಲವೆಂಬುವದು ಮೇಲಿನ ವಿವರಣೆಯಿಂದ ಗೊತ್ತಾಗುವಂತಿದೆ. ಆದರೆ ಆತ್ಮನು ಇಂದ್ರಿಯಗಳಿಗೆ ವಿಷಯನಾಗುವಂತಿರದಿರುವದರಿಂದಲೂ, ಅನುಮಾನಕ್ಕೆ ಸಾಧನವಾದ ಲಿಂಗ ಅಥವಾ ಗುರುತುಗಳು ಆತ್ಮನಲ್ಲಿ ಇಲ್ಲದಿರುವದರಿಂದಲೂ, ವೇದಾಂತ ಅಥವಾ ಉಪನಿಷತ್ತುಗಳೇ ಆತ್ಮಜ್ಞಾನಕ್ಕೆ ಪ್ರಮಾಣಗಳಾಗಿರುವವು. **ಆದುದರಿಂದ ಆತ್ಮಜ್ಞಾನವು ವೇದಾಂತ ಮತಕ್ಕನುಸರಿಸಿದ ಪ್ರಯೋಗಪೂರ್ವಕವಾದ ಸ್ವಾನುಭವದಿಂದಲೇ ಆಗಬೇಕಾಗುವದು.** ಆತ್ಮಜ್ಞಾನಕ್ಕೆ ವೇದಾಂತದ ಮಹಾವಾಕ್ಯಗಳೇ ಸಾಧನಗಳು. ಮಹಾವಾಕ್ಯಜ್ಞಾನವಾಗಲಿಕ್ಕೆ ಆಯಾ ವಾಕ್ಯದೊಳಗಿನ ಪದಗಳ ಸರಿಯಾದ ಅರ್ಥವನ್ನು ತಿಳಿದುಕೊಳ್ಳುವದು ಅತ್ಯವಶ್ಯಕವು. ಅದಕ್ಕಾಗಿ ವಿಚಾರವು ಬೇಕು. ಆದರೆ ಬರೇ ವಿಚಾರದಿಂದ ಮೋಕ್ಷವು ಸಿಕ್ಕಲಾರದು. ವಿಚಾರದಿಂದಾಗುವ ಜ್ಞಾನವೆಲ್ಲ ಪರೋಕ್ಷವಾಗಿರುತ್ತದೆ. **ಆತ್ಮಜ್ಞಾನವೆಂದರೆ ಶಾಬ್ದಿಕ ಜ್ಞಾನವಲ್ಲ; ಸ್ವಾನುಭವವು.** ಆತ್ಮವಿಚಾರವನ್ನು ಸ್ವಾನುಭವಪೂರ್ವಕವಾಗಿ ಆಯಾ ಸ್ಥಿತಿಗಳನ್ನು ಪರೀಕ್ಷಣೆ ಮಾಡುತ್ತ ಮಾಡಬೇಕಲ್ಲದೆ ಬರೇ ಒಂದು ಕಿವಿಯಿಂದ ಕೇಳಿ ಮತ್ತೊಂದು ಕಿವಿಯಿಂದ ಬಿಡುವದರಿಂದ ಆತ್ಮಜ್ಞಾನವೆಂದಿಗೂ ಆಗಲಾರದು. ಬಾಯಿಂದ, 'ನಾನು ರಾಜನಾಗಿರುವೆನು' ಎಂದ ಮಾತ್ರಕ್ಕೆ ಯಾರೂ ರಾಜರಾಗಲಾರರಷ್ಟೇ! ರಾಜನೆನಿಸಿಕೊಳ್ಳಬೇಕಾದರೆ ಮೊದಲು ಶತ್ರುಗಳನ್ನು ಗೆದ್ದು ರಾಜ್ಯಸಂಪಾದನೆ ಮಾಡಬೇಕಾಗುವದು. ಹಾಗೆಯೇ ಇಂದ್ರಿಯ, ಮನಸು ಮೊದಲಾದ ಶತ್ರುಗಳನ್ನು ಗೆದ್ದು ಸ್ವರಾಜ್ಯವನ್ನು ಸಂಪಾದಿಸಿದ ಮೇಲೆಯೇ ಆತ್ಮಜ್ಞಾನವಾಯಿತೆನ್ನಲು ಅಡ್ಡಿಯಿಲ್ಲ.

**ಆತ್ಮಜ್ಞಾನವೆಂದರೂ ಒಂದೇ, ಬ್ರಹ್ಮಜ್ಞಾನವೆಂದರೂ ಒಂದೇ. ಆತ್ಮವೆಂದರೇ ಬ್ರಹ್ಮ, ಬ್ರಹ್ಮವೆಂದರೇ ಆತ್ಮ.** ನಮ್ಮ ದೇಹದೊಳಗೆ ನಮ್ಮ ಸ್ವರೂಪವಾಗಿರುವದೇ ಆತ್ಮವು. ಹೊರಗೆ ಕಾಣುವ ಜಗತ್ತಿನ ಸ್ವರೂಪವಾಗಿರುವದೇ ಬ್ರಹ್ಮವು. ವಿಚಾರಮಾಡಿ ನೋಡಿದರೆ ಇವೆರಡೂ

ಒಂದೇ ಎಂದು ಸಿದ್ಧವಾಗುವದು. ಹೀಗೆ ಆತ್ಮಬ್ರಹ್ಮೈಕ್ಯವನ್ನು ಹೇಳಿ ಕೊಡುವದೇ ಮಹಾವಾಕ್ಯಗಳ ಕೆಲಸವು. ಈ ಐಕ್ಯಜ್ಞಾನದಿಂದಲೇ ಮೋಕ್ಷವು.

ಆತ್ಮ ಮತ್ತು ಬ್ರಹ್ಮರಲ್ಲಿ ಆತ್ಮದಿಂದಲೇ ಹೊರಡುವದು ಹೆಚ್ಚು ಸುಗಮವು. ಹೊರಗಿನ ಜಗತ್ತು ಇರುವದೋ ಇಲ್ಲವೋ ಎಂದು ಸಾಶಂಕಿತರಾಗಬಹುದು. ಆದರೆ, 'ನಾನು ಇದ್ದೇನೆ' ಎಂಬ ಬಗ್ಗೆ ಮಾತ್ರ ಯಾರಿಗೂ ಸಂದೇಹವುಂಟಾಗಲಾರದು. ಕಿಂಬಹುನಾ ಹಾಗೆ ಸಂಶಯವುಂಟಾಗುವದೇ ಅಶಕ್ಯವಿದೆ. 'ನಾನು ಇಲ್ಲ' ಎಂದು ಹೇಳು ವವನೊಬ್ಬನಾದರೂ ಬೇಕಲ್ಲವೇ? ಅವನೇ ಆತ್ಮನು. **'ನಾನು ಯಾರು?' ಎಂಬ ಬಗ್ಗೆ ಎಷ್ಟೇ ಭಿನ್ನಾಭಿಪ್ರಾಯಗಳಿದ್ದರೂ ನಾನು ಇರುವೆನೆಂಬ ಬಗ್ಗೆ ಮಾತ್ರ ಯಾರೂ ಸಂದೇಹಪಡುವದಿಲ್ಲ. ಆದುದರಿಂದ ಆತ್ಮಕಲ್ಪನೆಯಿಂದ ಹೊರಟು, ಅದೇ ಎಲ್ಲ ಕಡೆಗೆ, ಒಳಗೂ ಹೊರಗೂ ಇರುವದೆಂದು ಸಾಕ್ಷಾತ್ಕಾರ ಪಡೆಯತಕ್ಕದ್ದಿದೆ.**

ಆತ್ಮಜ್ಞಾನವೆಂದರೆ ನಮ್ಮ ಸ್ವರೂಪದ ಜ್ಞಾನವು. ನಮ್ಮ ಸ್ವರೂಪವನ್ನು ಹುಡುಕುವದಕ್ಕಾಗಿ ನಾವು ಕಾಶಿ, ರಾಮೇಶ್ವರಗಳಿಗೆ ಹೋಗುವದು ಸರಿಯಾಗಬಹುದೇ? ನಮ್ಮ ಸ್ವರೂಪವು ನಮ್ಮಲ್ಲಿಯೇ ಇರಬೇಕಲ್ಲವೇ? ಆದುದರಿಂದ ಯಾವುದೇ ಉಪಾಸನೆಯಿಂದ ಆತ್ಮಜ್ಞಾನ ವಾಗಲಾರದೆಂಬುದನ್ನು ತಿಳಿದುಕೊಳ್ಳುವದು ಬಲು ಮಹತ್ತ್ವದ ಮಾತು. ಉಪಾಸನೆಯೆಂದರೆ ಪೂಜೆ. ಉಪಾಸನೆಗೆ ಉಪಾಸ್ಯ-ಉಪಾಸಕವೆಂಬ ದ್ವೈತವು ಅವಶ್ಯವಾಗಿ ಬೇಕು. ದ್ವೈತವಿಲ್ಲದಿದ್ದರೆ ಉಪಾಸನೆಯುಂಟಾಗ ಲಾರದು. ಪರಮಾರ್ಥ ದೃಷ್ಟಿಯಿಂದ ಉಪಾಸಕ ಜೀವವೆಂಬುದಾಗಲಿ, ಉಪಾಸ್ಯದೇವನೆಂಬುವದಾಗಲಿ ಇಲ್ಲವೇ ಇಲ್ಲ. ಆದುದರಿಂದ ಪಂಚೋಪ ಚಾರ ಪೂಜೆಯಿಂದಾಗಲಿ, ಷೋಡಶೋಪಚಾರ ಪೂಜೆಯಿಂದಾಗಲಿ ಅಥವಾ ಸಹಸ್ರವಿಧದ ಪೂಜೆಯಿಂದಾಗಲಿ, ಪರಮಾತ್ಮನನ್ನು ಪ್ರಸನ್ನ

ಮಾಡಿಕೊಳ್ಳಲೆಳಿಸಬೇಕು, ಆದರಿಂದಲೇ ಮೋಕ್ಷವು,—ಎಂಬ ತಪ್ಪು ಕಲ್ಪನೆಯನ್ನು ಬ್ರಹ್ಮಜ್ಞಾನಾಪೇಕ್ಷಿಗಳು ಮೊದಲು ಕಿತ್ತೊಗೆಯಬೇಕು. "ಇದೇನು, ವೇದಾಂತದ ಸತ್ಸಾಂಪ್ರದಾಯವನ್ನು ಹೇಳುತ್ತೇವೆಂದು ಹೊರಟು, ನಾಸ್ತಿಕತನವನ್ನು ಹೇಳುತ್ತಿರುವಿರಲ್ಲ?" ಎಂದು ಯಾರೂ ನನಗೆ ಹೆಸರಿಡುವ ಕಾರಣವಿಲ್ಲ. **ನಾವು ಇಲ್ಲಿಯ ವರೆಗೆ ನಂಬುತ್ತ ಬಂದಿರುವ ನಂಬಿಗೆಗಳು, ಪೂಜಿಸುತ್ತ ಬಂದಿರುವ ದೇವತೆಗಳು, ಆಚರಿಸುತ್ತ ಬಂದಿರುವ ರೀತಿ ನಡಾವಳಿಗಳು ನಿರ್ಬಾಧವಾಗಿ ಉಳಿಯುವಂತೆ ತತ್ತ್ವಜ್ಞಾನವಿರಬೇಕೆಂದು ಹಟಹಿಡಿಯುವದು ಸರಿಯಲ್ಲ.** ನಾನು ಮೊದಲೇ ಹೇಳಲಿಲ್ಲವೇ, ತತ್ತ್ವಕ್ಕನುಸರಿಸಿದ್ದರೆ ಮಾತ್ರ ನಮ್ಮ ತಿಳಿವಳಿಕೆಯು ಜ್ಞಾನವೆಂದು ಕರಿಸಿಕೊಳ್ಳಲಿಕ್ಕೆ ಅರ್ಹವಾಗುವದೆಂದೂ, ಇಲ್ಲವಾದರೆ ಭ್ರಾಂತಿಯೆಂದು ಕರಿಸಿಕೊಳ್ಳುವದೆಂದೂ? **ತತ್ತ್ವವನ್ನು ಇದ್ದಕ್ಕಿದ್ದಂತೆ ತಿಳಿದುಕೊಳ್ಳುವದು ನಮ್ಮ ಕರ್ತವ್ಯವು. ನಾವು ಮಾಡಿಟ್ಟ ಕಲ್ಪನೆಗಳಿಗನುಸರಿಸಿ ತತ್ತ್ವವಿರಬೇಕೆಂದು ಅಪೇಕ್ಷಿಸುವದು ದುರಾಗ್ರಹವು.** ನಮ್ಮ ಕಲ್ಪನೆಗಳೇ ತತ್ತ್ವಕ್ಕನುಸರಿಸಿ ಮಾರ್ಪಾಟವಾಗಬೇಕಾಗಿದೆಯೆನ್ನುವದು ಸಮಂಜಸತನವು, ತತ್ತ್ವಜಿಜ್ಞಾಸೆಯು.

"ಹಾಗಾದರೇನು? ನಾವು ಇಲ್ಲಿಯ ವರೆಗೆ ಶ್ರಮಬಟ್ಟು ಪೂಜಿಮಾಡುತ್ತ ಬಂದಿರುವ ಬ್ರಹ್ಮ, ವಿಷ್ಣು, ಮಹೇಶ್ವರರ ಗತಿಯೇನು? ಶಾಕ್ತರು ಪೂಜಿಸುವ ದೇವಿಯ ಅವಸ್ಥೆಯೇನು? ಸೂರ್ಯ, ಚಂದ್ರ, ಗಣಪತಿ, ನಾಗಪ್ಪ, ಭರಮಪ್ಪ, ಕರೆವ್ವ, ಕಾಟೆವ್ವ ಮೊದಲಾದ ಅನೇಕಾನೇಕ ದೇವತೆಗಳು ಇನ್ನೇನು ಮಾಡಬೇಕು? ಮೇರುತಂತ್ರ, ಮಂತ್ರಮಹಾರ್ಣವ ಮೊದಲಾದ ಗ್ರಂಥಗಳಲ್ಲಿ ಕೋಟ್ಯಾವಧಿ ದೇವತೆಗಳ ಪೂಜಾದಿ ಕ್ರಮಗಳು ಹೇಳಲ್ಪಟ್ಟಿರುವವಲ್ಲ! ಈ ದೇವತೆಗಳೆಲ್ಲಾ ಮನೋರಾಜ್ಯದೊಳಗಿನ ಮೂರ್ತಿಗಳೇ ಮಾತ್ರವೇನು? ಹಾಗಿದ್ದರೆ ಉಪಾಸನಾಕಾಂಡವನ್ನಾದರೂ ಶಾಸ್ತ್ರವು ಏಕೆ ಹೇಳಬೇಕು?" ಇದಕ್ಕೆಲ್ಲ ನಾನು ಕೊಡುವ ಉತ್ತರವಿಷ್ಟೇ: ಇವೆಲ್ಲ ದೇವತೆಗಳೆಂಬುದೇನೋ

ಸರಿಯೇ. ಅವು ಮನೋರಾಜ್ಯದೊಳಗಿನ ಮೂರ್ತಿಗಳಲ್ಲವೆಂಬುದೂ ನಿಜವೇ. ಇಷ್ಟೇ ಅಲ್ಲ, ಶಾಸ್ತ್ರದೊಳಗೆ ಹೇಳಿದ ಉಪಾಸನಾಕ್ರಮಗಳನ್ನು ಅನುಸರಿಸಿ ನಡೆದರೆ ಆ ದೇವತೆಗಳ ದರ್ಶನವಾಗುವದೆಂದೂ, ಅವು ನಮ್ಮ ಕೂಡ ಮಾತುಕಥೆಯನ್ನಾಡುವವೆಂದೂ, ನಮಗೆ ಬೇಕಾದಾಗ ಸಹಾಯ ಮಾಡಿ ನಮ್ಮ ಅಡಚಣೆಗಳನ್ನು ದೂರಮಾಡುವವೆಂದೂ, ಅವಶ್ಯಬಿದ್ದಾಗ ನಮಗೆ ಆದೇಶಗಳನ್ನು ಕೊಡುವವೆಂದೂ ಅನುಭವಿಗಳು ಹೇಳುತ್ತಾರೆ. **ಇದೆಲ್ಲ ಸತ್ಯವಿದ್ದರೂ ಆ ದೇವತೆಗಳೆಲ್ಲ ಅನಾತ್ಮರೇ ಸರಿ.** ಇಂದ್ರಿಯ ಗೋಚರವಾದ ವ್ಯವಹಾರವು ಎಷ್ಟರಮಟ್ಟಿಗೆ ಸತ್ಯವಾಗಿರುವದೋ, ಸುಳ್ಳಾಗಿರುವದೋ, ಅದೇ ಮಟ್ಟಿಗೆ ಆ ದೇವತೆಗಳೂ ಸತ್ಯವಾಗಿರುವವು, ಸುಳ್ಳಾಗಿರುವವು. ಉಪಾಸನಾಕಾಂಡವೇ ಅಪೂಟ ಸುಳ್ಳೆಂದು ನಾನೇನೂ ಹೇಳುವದಿಲ್ಲ. ಉಪಾಸನೆಯಿಂದ ಸಿದ್ಧಿಗಳೂ ಪ್ರಾಪ್ತವಾಗಬಹುದು; ಪ್ರಾಪ್ತವಾಗುವವು. ಆದರೂ ಅದು ತತ್ತ್ವಜ್ಞಾನವಲ್ಲ. **ಉಪಾಸನಾ ಕಾಂಡವೆಲ್ಲ ಅವಿದ್ಯಾರಾಜ್ಯದೊಳಗಿನದೇ** ಎಂಬುದನ್ನು ಶ್ರೀಮಚ್ಛಂಕರ ಭಗವತ್ಪಾದರು ಸ್ಪಷ್ಟವಾಗಿಯೇ ಹೇಳಿದ್ದಾರೆ. ಮತ್ತು ಈಶ್ವರ ವಿಷ್ಣು ಮೊದಲಾದವರೆಲ್ಲ ಅನಾತ್ಮರೇ ಸರಿ, ಎಂದು ಕೇನೋಪನಿಷದ್ಭಾಷ್ಯದಲ್ಲಿ ಬಿಚ್ಚಿ ತೋರಿಸಿದ್ದಾರೆ. **ಆದುದರಿಂದ ಆತ್ಮಜ್ಞಾನವನ್ನೇ ಅಪೇಕ್ಷಿಸುವ ಮುಮುಕ್ಷುವಿನಲ್ಲಿ ಯಾವ ಮನೋದಾರ್ಢ್ಯವಿರಬೇಕೆಂಬುದನ್ನು ಸಾಧಕರೇ ಊಹಿಸಬೇಕು.** ನಿರಾಗ್ರಹಬುದ್ಧಿಯಿಂದ ವಿಚಾರಪೂರ್ವಕ ವಾಗಿ ತಿಳಿದು ನೋಡಿದರೆ ಯಾವ ಸಿದ್ಧಾಂತಗಳು ಸತ್ಯವೆಂದು ನಿಶ್ಚಯ ವಾಗುವದೋ, ಅವುಗಳನ್ನು ಸ್ವೀಕರಿಸುವದೇ ಜಿಜ್ಞಾಸುವಿನಲ್ಲಿರಬೇಕಾದ ಮಹತ್ವದ ಮನೋವೃತ್ತಿಯು.*

---

* ನಿರ್ಗುಣೋಪಾಸನೆಯನ್ನು ಮಾಡಬಹುದೆಂದು ಹಲವೆಡೆಗೆ ಹೇಳಿದ್ದಾರೆ. ಆದರೆ ಅಲ್ಲಿ "ಉಪಾಸನೆ" ಎಂಬ ಶಬ್ದಕ್ಕೆ "ಪೂಜೆ" ಎಂದು ಅರ್ಥ ಮಾಡ ಬಾರದು. ಎಡೆಬಿಡದೆ ಆತ್ಮತತ್ತ್ವದ ವಿಚಾರ ಮಾಡುತ್ತಿರುವವನ್ನೇ "ಉಪಾಸನೆ" ಎಂದು ಅಲ್ಲಿ ಕರೆದಿದ್ದಾರೆ. ಇದು ನಿಜವಾಗಿ ಉಪಾಸನೆಯಲ್ಲ. ಬೇಕಾದರೆ ಅದನ್ನು

"ನೇದಂ ಯದಿದ ಮುಪಾಸತೇ" ಎಂದು ಕೇನೋಪನಿಷತ್ತು ಬಲು ಧೈರ್ಯದಿಂದ ಈ ಮಾತನ್ನೇ ಹೇಳುತ್ತದೆ. ಈ ಮಾತನ್ನು ಒಂದೇ ಸಲವಲ್ಲ, ಐದು ಸಾರೆ ಒತ್ತಿ ಒತ್ತಿ ಹೇಳಿರುತ್ತದೆ. ದೇಹೇಂದ್ರಿಯ, ಪ್ರಾಣ, ಮನಸು ಮೊದಲಾದ ಸಾಧನಗಳೆಲ್ಲ ಯಾರ ಸಲುವಾಗಿ ಕೆಲಸ ಮಾಡುತ್ತವೆಯೋ, ಯಾರ ಆಧಾರದಿಂದ ಕೆಲಸ ಮಾಡುತ್ತವೆಯೋ ಅದೇ ಬ್ರಹ್ಮವೆಂದು ನೀನು ತಿಳಿ—"ತದೇವ ಬ್ರಹ್ಮತ್ವಂ ವಿದ್ಧಿ" ಎಂದು ಆ ಉಪನಿಷತ್ತು ಪುನಃ ಪುನಃ ಹೇಳುತ್ತದೆ. ಆ ಬ್ರಹ್ಮವು ಇಂದ್ರಿಯಗಳಿಗಾಗಲಿ, ಮನಸಿಗಾಗಲಿ, ಪ್ರಾಣಕ್ಕಾಗಲಿ ಎಂದೂ ತಿಳಿದುಬರುವದು ಶಕ್ಯವಿಲ್ಲ. ಆದರೆ ಇವುಗಳೆಲ್ಲ ನಿರಪವಾದವಾಗಿ ಆ ಬ್ರಹ್ಮಕ್ಕೆ ತಿಳಿದು ಬರುತ್ತವೆ. ಅದರಂತೆಯೇ ಬೃಹದಾರಣ್ಯಕೋಪನಿಷತ್ತು ಕೂಡ (೧.೪.೧೦) "ಯಾವನು ತಾನು ತನ್ನ ಉಪಾಸ್ಯನಿಂದ ಭಿನ್ನನೆಂದೂ, ಉಪಾಸ್ಯವು ತನ್ನಿಂದ ಭಿನ್ನವೆಂದೂ ತಿಳಿದು ಉಪಾಸನೆ ಮಾಡುತ್ತಾನೋ ಅವನಿಗೆ ತತ್ತ್ವಜ್ಞಾನವಾಗಿಲ್ಲ"ವೆಂದು ತಿಳಿಯಬೇಕೆಂದು ಸ್ಫುಟವಾಗಿಯೇ ಎಚ್ಚರಿಕೆ ಕೊಟ್ಟಿದೆ. ಇವುಗಳಿಂದ ಉಪನಿಷತ್ ಸಾಂಪ್ರದಾಯವು ಏತಕ್ಕೆ ಮಹತ್ವಕೊಡುವದೆಂಬುದು ಸಹಜವಾಗಿಯೇ ತಿಳಿದುಬರುವಂತಿದೆ.

---

 …. ೫

"ಆರು ನಾನೆಂಬು ವಿಚಾರಿಸು" ಎಂಬುದು ಉಪನಿಷತ್ತಿನ ಮಹಾ ಮಂತ್ರವಾದಂತಾಯಿತು. 'ನಾನೆಂ'ಬುದನ್ನು ನಮ್ಮಲ್ಲಿಯೇ ಹುಡುಕಬೇಕೆಂದೂ ನಿಶ್ಚಿತವಾದಂತಾಯಿತು. 'ನಾನೆಂ'ಬುದನ್ನು ನಿಶ್ಚಯಿಸುವ

---

ಆತ್ಮಾನುಸಂಧಾನವೆಂದು ಕರೆಯಬಹುದು. ಸಾಮಾನ್ಯರು ತಿಳಿದುಕೊಂಡಿರುವ ಉಪಾಸನೆಗೂ, ನಿರ್ಗುಣೋಪಾಸನೆಗೂ ಇರುವ ಭೇದವನ್ನು ಚೆನ್ನಾಗಿ ಲಕ್ಷ್ಯದಲ್ಲಿಡುವದು ಅವಶ್ಯಕವು.

ದಕ್ಕಾಗಿಯೇ ನಾವು ಕೆಲಕೆಲವು ಪ್ರಯೋಗಗಳನ್ನೂ, ಸಾಧನೆಗಳನ್ನೂ ಮಾಡಬೇಕಾಗುತ್ತದೆ. **ಪ್ರತಿಕ್ಷಣದಲ್ಲಿಯೂ ಎಚ್ಚರಾಗಿರುವದು, ಜಾಗೃತವಾಗಿರುವದು, ತನ್ನನ್ನು ತಾನೇ ನೋಡಿಕೊಳ್ಳುತ್ತಿರುವದು ಬಲು ಮುಖ್ಯವಾದ ಸಾಧನವು.** ನಮ್ಮಲ್ಲಿ ಪ್ರತಿಕ್ಷಣಕ್ಕೂ ಯಾವ ಯಾವ ಕಾರ್ಯಗಳು ನಡೆದಿರುವವೆಂಬದನ್ನು ಬಲು ಸೂಕ್ಷ್ಮಬುದ್ಧಿಯಿಂದ ನೋಡುತ್ತಿರಬೇಕು. ಇದರ ಅರ್ಥವು ಬಲು ಮಂದಿಗೆ ಒಮ್ಮೆಲೇ ಆಗಲಿಕ್ಕಿಲ್ಲ. ಆದರೆ ಅಭ್ಯಾಸ ಮಾಡುತ್ತ ಹೋದಂತೆ ತಿಳಿಯಹತ್ತುವದು. **ಇದಕ್ಕೆ ಅಂತರ್ನಿರೀಕ್ಷಣೆ ಅಥವಾ ಅಂತರ್ಮುಖತೆಯೆಂದು ಹೆಸರು ಕೊಡುತ್ತಾರೆ.** ಇದರೊಡನೆ ಎರಡನೆಯವರನ್ನೂ ಅವರ ಆಚರಣೆಯನ್ನೂ ಎಡಬಿಡದೆ ನೋಡುತ್ತಿರಬೇಕು. ತನ್ನಮೇಲೂ, ಸಾಧಿಸುವಂತಿದ್ದಲ್ಲಿ ಎರಡನೆಯವರ ಮೇಲೂ ಆಧ್ಯಾತ್ಮಿಕ ಪ್ರಯೋಗಗಳನ್ನು ಮಾಡುತ್ತಿರಬೇಕು. ಎಂದರೆ ಇವುಗಳ ಸಹಾಯದಿಂದ ಆತ್ಮಜ್ಞಾನವಾಗಲಿಕ್ಕೆ ಉಪಯೋಗವಾಗುವದು.

ನಮ್ಮ ಕಣ್ಣಿಗೆ ಕಾಣುವ ಸ್ಥೂಲದೇಹವೇ 'ನಾನೆಂ'ದು ಸರ್ವಸಾಮಾನ್ಯವಾಗಿ ನಾವೆಲ್ಲರೂ ವ್ಯವಹರಿಸುತ್ತೇವೆ. **ಈ ದೇಹವು ಎಲ್ಲಿಂದ ಬಂತು, ಅಥವಾ ಯಾಕೆ ಬಂತು ಎಂದು ಕೇಳುವದು ಅಪ್ರಸ್ತುತವು.** ಅದು ಬಂದದ್ದು ತಪ್ಪಾಯಿತೆಂದೂ, ಬರದಿದ್ದರೇ ನೆಟ್ಟಗಾಗುತ್ತಿತ್ತೆಂದೂ ಹೇಳಿದ ಮಾತ್ರಕ್ಕೆ ಆ ದೇಹವೇನೂ ಇಲ್ಲವಾಗಲಾರದಷ್ಟೇ? ಅದು ಎಲ್ಲಿಂದ ಬಂತೆಂದು ಮೊದಲಾಗಿ ವಿಚಾರ ಮಾಡುತ್ತ ಕೂಡ್ರುವದಕ್ಕಿಂತ ಅದರ ಬಂಧನವನ್ನು ಹೇಗೆ ತಪ್ಪಿಸಿಕೊಳ್ಳಬೇಕೆಂಬುದೇ ಮಹತ್ತ್ವದ ಪ್ರಶ್ನೆಯು. ಆತ್ಮಹತ್ಯೆಯಿಂದ ಅದನ್ನು ತಪ್ಪಿಸಿಕೊಳ್ಳಬಹುದೆಂದು ಯಾರೂ ಹೇಳಲಾರರೆಂದು ನಂಬಿದ್ದೇನೆ. ಆತ್ಮಹತ್ಯೆಯಿಂದ ದೇಹಬಂಧನವು ಮತ್ತಿಷ್ಟು ಗಟ್ಟಿಯಾಗಿ ದುಃಖವು ಹೆಚ್ಚುವದೆಂದೇ ವೇದಾಂತವು ಹೇಳುತ್ತದೆ. ಆದುದರಿಂದ ನಮಗೆಲ್ಲರಿಗೂ ಪ್ರತ್ಯಕ್ಷವಾಗಿಯೇ ಅನುಭವಕ್ಕೆ ಬರುತ್ತಿರುವ ದೇಹವನ್ನು ಹಿಡಿದುಕೊಂಡೇ ನಾವು ಆತ್ಮವಿಚಾರ ಮಾಡ

ಬೇಕು. ಎಂದರೆ ಆತ್ಮನನ್ನು ನಾವು ದೇಹದೊಳಗೆ ಅಥವಾ ದೇಹದ ಆಧಾರವನ್ನು ಹಿಡಿದುಕೊಂಡೇ ಹುಡುಕಬೇಕು. ಇದರ ವಿನಾ ಆತ್ಮ ಜ್ಞಾನಕ್ಕೆ ಇನ್ನೊಂದು ಮಾರ್ಗವಿಲ್ಲ. ಯಾಕೆಂದರೆ ಆತ್ಮನು ಚೈತನ್ಯ ಸ್ವರೂಪನಿದ್ದು, ಚೈತನ್ಯದ ಪ್ರತ್ಯಕ್ಷ ಅನುಭವವು ನಮಗೆ ನಮ್ಮ ದೇಹ ದೊಳಗೇ ಬರುತ್ತದಲ್ಲದೆ, ಎರಡನೆಯ ಕಡೆಗೆ ಬರಲಾರದು.

ಸ್ಥೂಲದೇಹವನ್ನೇ ಪರೀಕ್ಷಿಸಹತ್ತಿದೆವೆಂದರೆ ಅದೊಂದು ದೊಡ್ಡ ಯಂತ್ರಶಾಲೆ ಅಥವಾ ಕಾರಖಾನೆಯೇ ಇದ್ದಂತೆ ತೋರುವದು. ಶರೀರ ಶಾಸ್ತ್ರವನ್ನು ವಿವರಿಸುವದಾಗಲಿ, ಮನಶ್ಶಾಸ್ತ್ರವನ್ನು ಹೇಳುವದಾಗಲಿ ನನ್ನ ಸದ್ಯದ ಉದ್ದೇಶವಿಲ್ಲ. ಆದರೆ ವೇದಾಂತದ ಮಟ್ಟಿಗೆ ಕೆಲವು ಆವ ಶ್ಯಕವಾದ ವಿಚಾರಗಳನ್ನು ಮಾಡತಕ್ಕದ್ದಿದೆ. ಮನುಷ್ಯನ ದೇಹದಲ್ಲಿ ಪ್ರತಿಕ್ಷಣದಲ್ಲಿಯೂ ಅನೇಕ ವ್ಯಾಪಾರಗಳು ನಡೆದೇ ಇರುತ್ತವೆ. ದೈಹಿಕ ವ್ಯಾಪಾರಗಳನ್ನು ತುಸು ಚಿತ್ತವಿಟ್ಟು ನೋಡಹತ್ತಿದೆವೆಂದರೆ ಅವುಗಳಲ್ಲಿ ಮುಖ್ಯವಾಗಿ ಎರಡು ವರ್ಗಗಳಾಗುತ್ತವೆಂದು ಕಾಣುವದು—(೧) ಅಚೇ ತನ ಮತ್ತು (೨) ಸಚೇತನ. ಉಸಿರಾಡಿಸುವದು, ಪಚನಕ್ರಿಯೆ, ರಕ್ತದ ಹರಿದಾಟ ಇವೇ ಮೊದಲಾದವುಗಳು ಅಚೇತನ ವ್ಯಾಪಾರಗಳಲ್ಲಿ ಬರು ತ್ತವೆ. ನೋಡುವದು, ತಿನ್ನುವದು, ಕೇಳುವದು, ಚಿಂತನೆ ಮಾಡು ವದು, ಸಂಕಲ್ಪ ಮಾಡುವದು, ಇಚ್ಛಿಸುವದು, ನಿಶ್ಚಯಿಸುವದು, ಇವೇ ಮೊದಲಾದವುಗಳು ಸಚೇತನ ವ್ಯಾಪಾರಗಳು. ಸಚೇತನ ವ್ಯಾಪಾರ ವನ್ನೇ ಲಕ್ಷ್ಯಗೊಟ್ಟು ನೋಡತೊಡಗಿದರೆ, ದೇಹಕ್ಕೆ ಹತ್ತು ಇಂದ್ರಿಯ ಗಳಿರುವವೆಂದೂ ಹೊರಗಿನ ಜಗತ್ತಿನ ಸಂಗಡ ವ್ಯವಹಾರವಾಗುವದೆಲ್ಲವೂ ಈ ಇಂದ್ರಿಯುಗಳ ಮುಖಾಂತರವೇ ಎಂದೂ ಸಹಜವಾಗಿಯೇ ಗೊತ್ತಾ ಗುವಂತಿದೆ. ಹೊರಗಿನ ಕಚ್ಚಾ ಮಾಲನ್ನು ಒಳಗೆ ತೆಗೆದುಕೊಳ್ಳಲಿಕ್ಕೂ, ಒಳಗೆ ಸಿದ್ಧವಾದ ಪಕ್ಕಾ ಮಾಲನ್ನು ಹೊರಗೆ ಕಳಿಸಲಿಕ್ಕೂ ಕಾರಖಾನೆಗೆ ಬಾಗಿಲುಗಳಿರುವಂತೆ ಮನುಷ್ಯದೇಹಕ್ಕೂ ಬಾಗಿಲುಗಳಿವೆ. ಹೊರಗಿನ ಪದಾರ್ಥಗಳನ್ನು ಒಳಗೆ ತೆಗೆದುಕೊಳ್ಳುವದಕ್ಕೆ ಜ್ಞಾನೇಂದ್ರಿಯುಗಳೇ

ಬಾಗಿಲುಗಳಾಗಿವೆ. ಒಳಗಿನ ಪದಾರ್ಥಗಳನ್ನು ಹೊರಗೆ ಕಳಿಸುವದಕ್ಕೆ ಕರ್ಮೇಂದ್ರಿಯಗಳೇ ಬಾಗಿಲುಗಳು. ಹೀಗೆ ಇಂದ್ರಿಯಗಳು ಎರಡು ವಿಧವಾಗಿವೆ.

ಕಣ್ಣು, ಕಿವಿ, ಮೂಗು, ನಾಲಿಗೆ ಮತ್ತು ಚರ್ಮಗಳೆಂಬವು ಐದು ಜ್ಞಾನೇಂದ್ರಿಯಗಳು. ಇವುಗಳ ಸಹಾಯದಿಂದ ಬಾಹ್ಯಸೃಷ್ಟಿಯೊಳಗಿನ ಪದಾರ್ಥಗಳ ಜ್ಞಾನವು ನಮಗುಂಟಾಗುತ್ತದೆ. ಬಾಹ್ಯವಸ್ತುಗಳ ಜ್ಞಾನವೆಂದರೆ, ಆ ವಸ್ತುವಿನ ರೂಪ, ರಸ, ಶಬ್ದ, ಸ್ಪರ್ಶ, ಗಂಧಗಳ ಜ್ಞಾನವೇ ಹೊರತು ಬೇರೆ ಏನೂ ಇಲ್ಲ. ಕಣ್ಣಿನಿಂದ ರೂಪ, ಕಿವಿಯಿಂದ ಶಬ್ದ, ಮೂಗಿನಿಂದ ಗಂಧ, ನಾಲಿಗೆಯಿಂದ ರಸ ಮತ್ತು ಚರ್ಮದಿಂದ ಸ್ಪರ್ಶಗಳನ್ನು ನಾವು ತಿಳಿಯುತ್ತೇವೆ. ಶಾರೀರಿಕ ವ್ಯವಹಾರಗಳನ್ನೆಲ್ಲ ಜರುಗಿಸುವಂಥವು ಕರ್ಮೇಂದ್ರಿಯಗಳು. ಕೈ, ಕಾಲು, ವಾಣಿ, ಗುದ ಮತ್ತು ಜನನೇಂದ್ರಿಯಗಳೇ ಐದು ಕರ್ಮೇಂದ್ರಿಯಗಳು. ಕೈಯಿಂದ ಎತ್ತುವ ಅಥವಾ ಹಿಡಿಯುವ ಕೆಲಸವು, ಕಾಲಿನಿಂದ ನಡೆದಾಡುವದು, ವಾಣಿಯಿಂದ ಮಾತಾಡುವದು, ಗುದದಿಂದ ಮಲವಿಸರ್ಜನೆಯು, ಜನನೇಂದ್ರಿಯದಿಂದ ಆನಂದವನ್ನನುಭವಿಸುವದು ಅಥವಾ ಮಕ್ಕಳನ್ನು ಹಡೆಯುವ ಕೆಲಸವು ಆಗುತ್ತವೆ. ನಿಮಗೆ ಈ ಇಂದ್ರಿಯಗಳ ಬಗ್ಗೆ ಹೆಚ್ಚಾಗಿ ಹೇಳುವ ಕಾರಣವಿಲ್ಲದ್ದರಿಂದ ಈ ವಿಷಯವನ್ನು ಇಷ್ಟಕ್ಕೇ ಮುಗಿಸುತ್ತೇನೆ.

ಸ್ಥೂಲದೇಹವೇ "ನಾನಲ್ಲವೆ"ಂದು ಎಲ್ಲರಿಗೂ ಸುಲಭವಾಗಿ ತಿಳಿಯುವಂತಿದೆ. ನೀವು ಆ ಬಗ್ಗೆ ವಿಶೇಷವಾಗಿ ಕೇಳಿದವರಾಗಿರುವದರಿಂದ ಅದನ್ನು ನಾನು ಹೆಚ್ಚಾಗಿ ಬೆಳಿಸುವದಿಲ್ಲ. ದೇಹವು ಅನ್ನಕಾರ್ಯವಾಗಿ, ಅನ್ನರೂಪವಾಗಿ ಉತ್ಪತ್ತಿ ನಾಶಗಳುಳ್ಳದ್ದಾಗಿರುವದು. ಸ್ಥೂಲದೇಹವು ಸ್ವಪ್ನದಲ್ಲಿ ಇರುವದಿಲ್ಲವಾದರೂ 'ನಾನೆ'ಂಬುದು ಅಲ್ಲಿ ಇದ್ದೇ ಇರುವದರಿಂದ–ಸ್ಥೂಲದೇಹವು ಆತ್ಮವಾಗವಾಗಲಾರದು. ಮೇಲಾಗಿ ಸ್ಥೂಲದೇಹವು ದೃಶ್ಯವಾಗಿರುವದರಿಂದ ಉಳಿದೆಲ್ಲ ದೃಶ್ಯಪದಾರ್ಥಗಳಂತೆ

ಆತ್ಮನಿಗಿಂತ ಬೇರೆಯಾಗಿರಬೇಕು. ಯಾಕೆಂದರೆ ನೋಡಲ್ಪಡುವ ವಸ್ತುವನ್ನು ನೋಡುವವನು, ಅದಕ್ಕಿಂತ ಬೇರೆ ಇರಲೇಬೇಕು. ಮತ್ತು ನಾವೂ ಕೂಡ ದೇಹವನ್ನು "ನನ್ನ"ದೆಂದು ಕರೆಯುತ್ತೇವಷ್ಟೇ? ಇವೆಲ್ಲ ಕಾರಣಗಳ ಮೇಲಿಂದ ದೇಹವು ಆತ್ಮವಾಗಲಾರದೆಂಬುದು ಸ್ಪಷ್ಟವಿದೆ. ಇಂದ್ರಿಯಗಳ ಗೂಡುಗಳು ಅಥವಾ ಗೋಲಕಗಳಾದರೂ ಈ ಸ್ಥೂಲ ದೇಹದಲ್ಲಿಯೇ ಬರುವದರಿಂದ ಅವೂ ಆತ್ಮವಾಗಲಾರವೆಂದು ಇದರಿಂದಲೇ ಸಿದ್ಧವಾಗುತ್ತದೆ.

ಹತ್ತೂ ಇಂದ್ರಿಯಗಳ ವ್ಯಾಪಾರಗಳನ್ನು ಸೂಕ್ಷ್ಮವಾಗಿ ನೋಡ ಹತ್ತಿದೆನೆಂದರೆ ಅವೂ ಸ್ವತಂತ್ರವಾಗಿ ಇರುವದಿಲ್ಲೆಂದು ನಮಗೆ ತಿಳಿದು ಬರದಿರಲಾರದು. ಉದಾಹರಣೆಗಾಗಿ ಜ್ಞಾನೇಂದ್ರಿಯಗಳ ಕೆಲಸವನ್ನು ತೆಗೆದುಕೊಳ್ಳುವಾ. ಈಗ ರಾತ್ರಿಯು ೧೦ ಗಂಟೆಯಾಗಿರುವದು; ಇದನ್ನು ತೋರಿಸುವದಕ್ಕಾಗಿ ಕಚೇರಿಯೊಳಗೆ ೧೦ ಸಾರೆ ಗಂಟೆಯನ್ನು ಬಾರಿಸುತ್ತಾರಷ್ಟೇ? ನನ್ನ ಕಿವಿಯು ಗಂಟೆಯ ಸಪ್ಪಳವನ್ನು ಹತ್ತೂ ಸಲ ಕೇಳುವದಿಷ್ಟೇ. ಆದರೆ ಪ್ರತಿಯೊಂದು ಗಂಟೆಯ ಸಂಸ್ಕಾರವು ಮನಸ್ಸಿನ ಮೇಲೆ ಬೇರೆ ಬೇರೆಯಾಗಿ ಉಂಟಾಗುತ್ತದೆ. ಅನಂತರ ಅವುಗಳನ್ನೆಲ್ಲಾ ನಾವು ಒಟ್ಟುಗೂಡಿಸಿ ಎಷ್ಟು ಹೊಡೆಯಿತೆಂಬದನ್ನು ನಿಶ್ಚಯಿಸುತ್ತೇವೆ. ಅದರಂತೆಯೇ ನಾವು ಮನುಷ್ಯನ ನಾಡೀ ಪರೀಕ್ಷೆಯನ್ನು ಮಾಡುತ್ತಿರುವೆವೆಂದು ಇಟ್ಟುಕೊಳ್ಳೋಣ. ಮಿನಿಟಿಗೆ ಅದು ಎಷ್ಟೋ ಸಲ ಹಾರುವದು. ಪ್ರತಿಯೊಂದು ಹಾರುವಿಕೆಯಿಂದ ನಮ್ಮ ಚರ್ಮದ ಮೇಲೆ ಬೇರೆ ಬೇರೆ ಆಘಾತಗಳಾಗುವವು. ಆದರೆ ಅವೆಲ್ಲವುಗಳ ಏಕೀಕರಣ ಮಾಡಿ ನಾಡಿಯು ಇಷ್ಟು ಸಲ ಹಾರಿದ್ದರಿಂದ ಈ ಮನುಷ್ಯನ ಪ್ರಕೃತಿಮಾನವು ಹೀಗೆಯೇ ಇರುವದೆಂಬದನ್ನು ನಿಶ್ಚಯಿಸುವ ಕೆಲಸವು ಮನಸ್ಸಿನದು. ಪಶುಗಳಿಗೂ ಜ್ಞಾನೇಂದ್ರಿಯಗಳಿರುವವು. ಆದರೆ ಅವುಗಳನ್ನು ಏಕೀಕರಿಸುವ ಶಕ್ತಿಯು ಅವುಗಳಿಗಿರುವದಿಲ್ಲವೆಂತಲೇ ಮನುಷ್ಯನಿಗಿಂತ ಅವು ಕಡಿಮೆಯವಾಗಿವೆ. **ಹೀಗೆ ಒಂದೊಂದೇ**

ಇಂದ್ರಿಯದಿಂದಾಗುವ ಸಂಸ್ಕಾರಗಳನ್ನೂ ಬೇರೆ ಬೇರೆ ಇಂದ್ರಿಯ ಗಳಿಂದಾಗುವ ಸಂಸ್ಕಾರಗಳನ್ನೂ ಕೂಡಿಸುವ ಪದಾರ್ಥವೊಂದು ಇರಲೇಬೇಕೆಂದು ನಾವು ಒಪ್ಪಬೇಕಾಗುವದು. ಇಂದ್ರಿಯಗಳು ಬೇರೆ ಬೇರೆಯಾಗಿ ತಮ್ಮ ತಮ್ಮ ವಿಷಯಗಳ ಜ್ಞಾನವನ್ನು ಮಾತ್ರ ಮಾಡಿ ಕೊಡುತ್ತವೆ. ಆ ಐದೂ ಇಂದ್ರಿಯಗಳಿಂದಾಗುವ ಜ್ಞಾನವನ್ನು ಕೂಡಿ ಸುವ ಶಕ್ತಿಯು ಅವಕ್ಕೆ ಇರುವದಿಲ್ಲೆಂಬದು ಸ್ಪಷ್ಟವಿದೆ. ಆದುದರಿಂದ ಅವುಗಳನ್ನು ಏಕೀಕರಿಸುವ ಅಂತಃಕರಣವೊಂದು ಇದೆಯೆಂದು ಸಿದ್ಧ ವಾಗುತ್ತದೆ. ಮತ್ತು ಜ್ಞಾನೇಂದ್ರಿಯಗಳು ತಾವೇ ಸ್ವತಂತ್ರವಾಗಿ ಬಿಟ್ಟಿದ್ದರೆ, ಒಂದೇ ಕಾಲಕ್ಕೆ ಐದೂ ಇಂದ್ರಿಯಗಳಿಂದ ಜ್ಞಾನವಾಗು ವದೂ ಶಕ್ಯವಾಗಬೇಕಾಗುತ್ತದೆ. ಆದರೆ ನಮ್ಮ ಅನುಭವವು ಮಾತ್ರ ಹಾಗಿರುವದಿಲ್ಲ. ಲಕ್ಷ್ಯಪೂರ್ವಕವಾಗಿ ರೂಪವನ್ನು ನೋಡುತ್ತಿರುವಾಗ ಶಬ್ದವು ಕೇಳಿಸುವದಿಲ್ಲ. ಶಬ್ದವನ್ನು ಕೇಳುತ್ತಿದ್ದಾಗ ರೂಪವು ಕಾಣಿ ಸುವದಿಲ್ಲ. ಒಂದು ಕಾಲಕ್ಕೆ ಒಂದೇ ಇಂದ್ರಿಯದ ಜ್ಞಾನವು ಮಾತ್ರ ಆಗುವದೆಂದು ಕಂಡುಬರುತ್ತದೆ. ಅಷ್ಟಾವಧಾನಿಗಳೂ ಶತಾವಧಾನಿಗಳೂ ಒಂದೇ ಕಾಲಕ್ಕೆ ಹಲವು ಮಾತಿನ ಕಡೆಗೆ ಲಕ್ಷ್ಯಗೊಡುವಂತೆ ಕಂಡರೂ ಅದರಲ್ಲಿ ಅರ್ಥವಿಲ್ಲ. ಅವರು ತಮ್ಮ ಮನಸ್ಸಿನ ಪ್ರಬಲವಾದ ವೇಗದಿಂದ ಕ್ಷಣಾರ್ಧದಲ್ಲಿ ಒಂದರಿಂದ ಒಂದು ವಸ್ತುವಿಗೆ ಹಾರಿ ಎಲ್ಲ ವಸ್ತುಗಳನ್ನು ತಿಳಿದುಕೊಳ್ಳುವರು, ಇಷ್ಟೇ. ಒಂದೇ ಕಾಲಕ್ಕೆ ಎಲ್ಲ ಮಾತುಗಳನ್ನು ತಿಳಿದುಕೊಳ್ಳುವದು ಶಕ್ಯವಿಲ್ಲ. "ನನ್ನ ಲಕ್ಷವು ಎರಡನೆಯ ಕಡೆಗೆ ಇದ್ದುದರಿಂದ ನಾನು ನೋಡಲಿಲ್ಲ" "ನನ್ನ ಲಕ್ಷವು ಎರಡನೆಯ ಕಡೆಗೆ ಇದ್ದುದರಿಂದ ನಾನು ಕೇಳಲಿಲ್ಲ."* ಎಂದು ನಾವು ಮೇಲಿಂದ ಮೇಲೆ ಹೇಳುತ್ತಿರುತ್ತೇವೆ. ಇಂದ್ರಿಯಗಳಿಂದ ಭಿನ್ನವಾಗಿಯೂ, ಅವುಗಳಿಗೆಲ್ಲಾ ಸಾಮಾನ್ಯವಾಗಿಯೂ, ಅವುಗಳ ವ್ಯಾಪಾರಗಳನ್ನೆಲ್ಲಾ ವ್ಯವಸ್ಥೆಯಿಂದ ಕ್ರಮಪಡಿಸುವ ಅಂತಃಕರಣವೊಂದಿರಲೇ ಬೇಕೆಂಬುದಕ್ಕೆ ಇನ್ನೂ ಒಂದು

---

* ಬೃಹದಾರಣ್ಯಕೋಪನಿಷತ್ತು ೧, ೫, ೩ ನೋಡಿರಿ.

ಕಾರಣವುಂಟು. ನೋಡಿದವನೇ ಮಾತ್ರ ನೋಡಿದವಸ್ತುಗಳನ್ನು ತಿರುಗಿ ನೆನಿಸುವದು ಶಕ್ಯವುಂಟು. ಕನಸಿನಲ್ಲಿ ನಾವು ಎಚ್ಚರಿಕೆಯೊಳಗೆ ನೋಡಿದ ಪದಾರ್ಥಗಳನ್ನೇ ತಿರುಗಿ ನೆನಿಸುತ್ತಿರುತ್ತೇವೆ. ಕನಸಿನಲ್ಲಿಯಂತೂ ಇಂದ್ರಿಯಗಳು ಕೆಲಸ ಮಾಡುತ್ತಿರುವದಿಲ್ಲ. ಆದುದರಿಂದ ಕನಸಿನೊಳಗೆ ಕೆಲಸ ಮಾಡುತ್ತಿರುವ ಮನಸ್ಸೇ ಎಚ್ಚರಿಕೆಯಲ್ಲಾದರೂ ಇಂದ್ರಿಯ ಮುಖಾಂತರವಾಗಿ ಕೆಲಸ ಮಾಡುವದೆಂದರಿಯಬೇಕಾಗುವದು. ಸಾರಾಂಶವೇನೆಂದರೆ— **ಇಂದ್ರಿಯಗಳು ಸ್ವತಂತ್ರವಾಗಿರದೆ ಅಂತಃ ಕರಣವೇ ಅವುಗಳ ಮುಖಾಂತರವಾಗಿ ಕೆಲಸ ಮಾಡುವದು, ಒಂದೇ ಅಂತಃಕರಣವೇ ಕಣ್ಣಾಗಿ ನೋಡುವದು, ಕಿವಿಯಾಗಿ ಕೇಳುವದು, ಮೂಗಾಗಿ ಮೂಸುವದು, ವಾಣಿಯಾಗಿ ಮಾತನಾಡುವದು, ನಾಲಿಗೆ ಯಾಗಿ ರುಚಿನೋಡುವದು, ಕಾಲಾಗಿ ನಡೆಯುವದು, ಕೈಯಾಗಿ ಹಿಡಿಯುವದು, ಗುದವಾಗಿ ಮಲವಿಸರ್ಜನೆ ಮಾಡುವದು.** ಹೀಗೆ ಸ್ಥೂಲದೇಹದಲ್ಲಿದ್ದುಕೊಂಡು, ನಮ್ಮಿಂದಾಗುವ ಎಲ್ಲ ವ್ಯಾಪಾರಗಳಿಗೂ ಸಾಧನವಾಗಿರುವದು ಈ ಅಂತಃಕರಣವೊಂದೇ. ಎಂತೆಯೇ, ಅಂತಃ ಕರಣವೆಂಬುವದೊಂದೇ ಉಪಾಧಿಯು ಆತ್ಮನಿಗೆ ಗಂಟುಬಿದ್ದಂತೆ ತೋರು ತ್ತದೆಂದು ಶ್ರೀಮಚ್ಛಂಕರ ಭಗವತ್ಪಾದರ ಅಂಬೋಣವಿದೆ. ಈ ಉಪಾಧಿ ಯಿಂದಲೇ ಆತ್ಮನು ಜೀವರೂಪನಾಗಿರುವಂತೆ ಕಾಣುತ್ತಾನೆ. ಇನ್ನು ಈ ಅಂತಃಕರಣವೆಂದರೆ ಏನು ಎಂಬದನ್ನು ಕುರಿತು ತುಸು ಸೂಕ್ಷ್ಮವಾಗಿ ವಿಚಾರ ಮಾಡುವಾ.

ಈ ಅಂತಃಕರಣವು ಸ್ವತಃ ಜಡವಾಗಿರುತ್ತದೆ. ಅದು ಅಪಂಚೀ ಕೃತ ಮಹಾಭೂತಗಳಿಂದ ನಿರ್ಮಿತವಾದ ಸ್ವಚ್ಛವಾದುದೊಂದು ದ್ರವ್ಯದ ವಿಕಾರವು. ಅದು ಎಚ್ಚರದಲ್ಲಿ ಶರೀರವನ್ನೆಲ್ಲ ವ್ಯಾಪಿಸಿರುತ್ತದೆ. ಅದರ ಮುಖ್ಯ ಸ್ಥಾನವು ಹೃದಯವು. ಎಂದರೆ ಆತ್ಮನೊಡನೆ ದೇಹದ ಸಂಬಂಧ ಬಂದಂತೆ ತೋರುವ ಮುಖ್ಯ ಸ್ಥಾನವೇ ಈ ಹೃದಯವು. ಗರ್ಭಾಶಯ ದಲ್ಲಿ ಹೃದಯವೇ ಮೊದಲು ರೂಪುಗೊಳ್ಳುತ್ತದೆ. ಹೃದಯದ ರೋಗಗಳು

ಕೂಡಲೇ ಮನುಷ್ಯನನ್ನು ನಿರ್ಜೀವ ಮಾಡುತ್ತವೆ. ಮತ್ತು ದುಃಖ ಸುಖ ಮೊದಲಾದ ವಿಕಾರಗಳ ಪರಿಣಾಮವು ಹೃದಯದ ಮೇಲೆಯೇ ವಿಶೇಷವಾಗಿ ಆಗುತ್ತದೆ. ಇವೆಲ್ಲ ಕಾರಣಗಳ ಮೂಲಕವಾಗಿ ಉಪನಿಷತ್ ಕಾರರು ಹೃದಯಕ್ಕೆ ಹೆಚ್ಚಿನ ಮಹತ್ವವನ್ನು ಕೊಟ್ಟಿರುತ್ತಾರೆ. (ಮಿದುಳೂ ಮಜ್ಜಾತಂತುಗಳೂ ಹೃದಯಕ್ಕೆ ಅಧೀನವಾಗಿ ನಡೆಯುವ ಯಂತ್ರ ವಿಶೇಷಗಳೆಂದು ತಿಳಿಯಲಭ್ಯಂತರವಿಲ್ಲ.) ಮತ್ತು ಈ ದೃಷ್ಟಿಯಿಂದಲೇ ಪರಮಾತ್ಮನನ್ನು ಹೃದಯಗುಹೆಯೊಳಗೆ ಹುಡುಕಬೇಕೆಂದು ನಮ್ಮ ಋಷಿಗಳು ಹೇಳಿರುತ್ತಾರೆ. ಆತ್ಮನ ಆಧಾರದಿಂದ ಅಂತಃಕರಣಕ್ಕೂ ಹೃದಯಕ್ಕೂ ಗಂಟುಬಿದ್ದೊಡನೆ ದೇಹದಲ್ಲಿ ಜ್ಞಾನಶಕ್ತಿ ಕ್ರಿಯಾಶಕ್ತಿ ಗಳೆರಡೂ ಕಾಣಿಸಿಕೊಳ್ಳುವವು. **ಅದರ ಜ್ಞಾನಶಕ್ತಿಯ ಭಾಗಕ್ಕೇ ಅಂತಃಕರಣವೆಂದೂ ಕ್ರಿಯಾಶಕ್ತಿಯ ಭಾಗಕ್ಕೆ ಪ್ರಾಣವೆಂದೂ*** **ಹೆಸರು ಕೊಡುವ ವಾಡಿಕೆಯುಂಟು.** ನಮ್ಮಲ್ಲಿ ಕಾಣಿಸಿಕೊಳ್ಳುವ 'ಸಚೇತನ' ವ್ಯವಹಾರವೆಲ್ಲ ಜ್ಞಾನಶಕ್ತಿಯಿಂದಲೇ ಆಗುತ್ತದೆ. ಇಂದ್ರಿಯ ಗಳಿಂದ ಆಗುವ ವ್ಯವಹಾರವೂ, ಮನಸ್ಸು, ಬುದ್ಧಿ ಮೊದಲಾದವುಗಳ ವ್ಯವಹಾರವೂ ಈ "ಸಚೇತನ"ವೆಂಬ ವ್ಯವಹಾರದೊಳಗೇ ಬರುತ್ತದೆ. ಆದರೆ ನಮ್ಮ ದೇಹದೊಳಗೆ ಇದೊಂದೇ ವ್ಯಾಪಾರವಿರುವದಿಲ್ಲ. ನಾವು ಗಡದ್ದು ನಿದ್ದೆಹತ್ತಿ ಮಲಗಿಕೊಂಡಾಗ ಈ "ಸಚೇತನ" ವ್ಯವಹಾರ ವೆಲ್ಲಾ ಬಂದಾಗುತ್ತದೆ. ಎಚ್ಚರಿಕೆ, ಕನಸುಗಳಲ್ಲಿ ಮಾತ್ರ ಈ ವ್ಯವ ಹಾರವು ಪ್ರಕಟವಾಗಿರುತ್ತದೆ. ಆದರೆ ನಿದ್ದೆಯಲ್ಲಿ ಸಹ ಶರೀರದೊಳಗಿನ ಪ್ರಾಣದ ಕ್ರಿಯೆಯು ಅವ್ಯಾಹತವಾಗಿಯೇ ನಡೆದಿರುತ್ತದೆ. ಶ್ವಾಸೋ ಚ್ಛ್ವಾಸ, ರುಧಿರಾಭಿಸರಣ, ದೇಹದ ಬೆಳವಣಿಗೆ ಮೊದಲಾದ ಕ್ರಿಯೆಗಳೆಲ್ಲ ನಮ್ಮ ಶರೀರದಲ್ಲಿ ಅವ್ಯಾಹತವಾಗಿ ನಡೆದೇ ಇರುತ್ತವೆ. ಎಂತೆಯೇ ಶ್ರೀಶಂಕರಾಚಾರ್ಯರವರು ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ (೪.೨.೩)

---

* ಪ್ರಾಣ ಶಬ್ದಕ್ಕೆ ಕೊಟ್ಟಿರುವ ಈ ಅರ್ಥವನ್ನು ಚನ್ನಾಗಿ ಲಕ್ಷ್ಯದಲ್ಲಿಡಬೇಕು. ಇಲ್ಲವಾದರೆ ಇಲ್ಲಿಯ ವಿವರಣೆಯ ಮರ್ಮವೇ ತಿಳಿಯಲಾರದು.

"ಗಾಢನಿದ್ರೆ ಹತ್ತುವಾಗಲೂ, ಸಾಯುವಾಗಲೂ, ಸ್ಫುರಣ ಅಥವಾ ಅಲುಗಾಟ ರೂಪದಿಂದ ನಿಂತಿರುವ ಪ್ರಾಣದಲ್ಲಿ ಮನೋವೃತ್ತಿಗಳೆಲ್ಲ ಲಯವಾಗುವದು ಕಂಡುಬರುತ್ತದೆ" ಎಂದು ಹೇಳಿದ್ದಾರೆ. ಮತ್ತು ದೇಹ, ಇಂದ್ರಿಯ ಹಾಗು ಮನಸ್ಸುಗಳ ಅಲುಗಾಟ ಅಥವಾ ಚಲನವಲನವೆಲ್ಲ ಪ್ರಾಣಶಕ್ತಿಯ ಮೇಲೆಯೇ ಅವಲಂಬಿಸಿರುತ್ತದೆ. ಹೀಗೆ ಇಂದ್ರಿಯ ಮತ್ತು ಮನಸುಗಳೂ ಸಹ ತಮ್ಮ ವ್ಯಾಪಾರಕ್ಕಾಗಿ ಪ್ರಾಣದ ಮೇಲೆಯೇ ಅವಲಂಬಿಸಿರುವದರಿಂದ ಪ್ರಾಣವೇ ಎಲ್ಲಕ್ಕಿಂತಲೂ ಶ್ರೇಷ್ಠವೆಂದು ಉಪನಿಷತ್ತುಗಳಲ್ಲಿ ನಿರ್ಣಯಿಸಿದ್ದಾರೆ. ಈ ವಿಷಯವಾಗಿ ಹೆಚ್ಚು ಸಂಗತಿಗಳನ್ನು ಅಪೇಕ್ಷಿಸುವವರು ಶಾಂಕರ ಬ್ರಹ್ಮಸೂತ್ರ ಭಾಷ್ಯದ ೨ನೆಯ ಅಧ್ಯಾಯದ ೪ನೆಯ ಪಾದವನ್ನು ನೋಡಬೇಕು. ಇದೇ ಸಂದರ್ಭದಲ್ಲಿ ಬೃಹದಾರಣ್ಯಕೋಪನಿಷದ್ಭಾಷ್ಯವನ್ನೂ (೧.೫.೨೧) ಬೇಕಾದವರು ನೋಡಬಹುದು. ವ್ಯಾಪಾರಗಳ ದೃಷ್ಟಿಯಿಂದ ನೋಡಿದರೆ ಸಚೇತನ ಅಂತಃಕರಣವೂ, ಪ್ರಾಣವೂ ಬೇರೆ ಬೇರೆಯೆಂದೇ ತಿಳಿಯಬೇಕಾಗುತ್ತದೆ. ಆದರೆ ಪ್ರಾಣಕ್ಕಾದರೂ 'ಅಚೇತನ' ಅಂತಃಕರಣವೇ ಆಧಾರ ಅಥವಾ ಕಾರಣವಾಗಿರುವದರಿಂದ ಪ್ರಾಣ ಮತ್ತು ಅಂತಃಕರಣಗಳು ಬೇರೆ ಬೇರೆಯಲ್ಲವೆಂದೂ ಹೇಳಬಹುದು. ಇದೆಲ್ಲದರ ಸಾರಾಂಶವೆಂದರೆ ಇಷ್ಟೇ:— ಮೂಲತಃ ಜಡವಾದ ಅಂತಃಕರಣವು ಹೃದಯದ ಮುಖಾಂತರವಾಗಿ ಆತ್ಮನೊಡನೆ ಸಂಬದ್ಧವಾದೊಡನೆ ಅದರಲ್ಲಿ ಪ್ರಾಣಶಕ್ತಿಯು ಕಾಣಹತ್ತಿ ಪ್ರಾಣದ ಕೆಲಸಗಳೆಲ್ಲ ದೇಹದೊಳಗೆ ಸುರುವಾಗುವವು. ಆದರೆ ಆಗ ಆತ್ಮನ ಆಭಾಸವು ಅಂತಃಕರಣದೊಳಗೆ ಸ್ಪಷ್ಟವಾಗಿಯೇ ಒಡಮೂಡಿರುವ ಕಾರಣವಿಲ್ಲ. ಅಂತಃಕರಣದೊಳಗೆ ಆಭಾಸವು ಮೂಡಿದೊಡನೆ 'ಸಚೇತನ'ವೆಂದು ಕರೆಯಲ್ಪಡುವ ಇಂದ್ರಿಯ ಮತ್ತು ಮನಸ್ಸುಗಳ ವ್ಯಾಪಾರವು ಸುರುವಾಗುವದು. ಅಂತಃಕರಣವು ಸ್ವಚ್ಛವಾಗಿರುವದರಿಂದ ಆತ್ಮಚೈತನ್ಯದ ಪ್ರತಿಬಿಂಬ ಅಥವಾ ಆಭಾಸವು ಅದರಲ್ಲಿ ಮೂಡುವದು. ಎಚ್ಚರಿಕೆಯೊಳಗೆ ಅಂತಃಕರಣವು ದೇಹವನ್ನೆಲ್ಲ ವ್ಯಾಪಿಸಿರುವದರಿಂದ, ಆಭಾಸವಾದರೂ ಆಗ ದೇಹದ ತುಂಬೆಲ್ಲ ಹಬ್ಬಿರು

ವದು. ಎಂತೆಯೇ ಎಚ್ಚರಿಕೆಯಲ್ಲಿ ಇಡೀ ದೇಹವೇ ಚೈತನ್ಯಮಯವಾಗಿ ತೋರುವದು. ಕನಸು ಕಾಣುವಾಗ ಅಂತಃಕರಣದ ಸ್ಥಿತಿಯು ಬದಲಾಗುತ್ತದೆ. ಆಗ ಅದು ಇಡೀ ದೇಹವನ್ನೆಲ್ಲ ವ್ಯಾಪಿಸಿರುವದಿಲ್ಲ. ಅದಕ್ಕನುಸಾರವಾಗಿ ಆತ್ಮನ ಆಭಾಸವಾದರೂ ಆಗ ಶರೀರದ ತುಂಬೆಲ್ಲ ಹಬ್ಬಿರುವದಿಲ್ಲ. ಆಗ ಅಂತಃಕರಣವು ಕಂಠದ ಭಾಗದಲ್ಲಷ್ಟೇ ಇರುವದರಿಂದ, ಆಭಾಸವಾದರೂ ಕನಸಿನಲ್ಲಿ ಕಂಠದಲ್ಲಿರುವದೆಂದು ಉಪನಿಷತ್ತುಗಳಲ್ಲಿ ವರ್ಣಿತವಾಗಿದೆ. ಎಂತೆಯೇ ಆಗ ಹಿಂದಿನ ಅನುಭವಚಿಂತನೆಯಷ್ಟೇ ನಡೆದಿರುತ್ತದೆ. ದೇಹವೂ ಇಂದ್ರಿಯಗಳೂ ನಿಶ್ಚೇಷ್ಟವಾಗಿ ಬಿದ್ದುಕೊಂಡಿರುತ್ತವೆ. ಆದರೆ ಗಾಢನಿದ್ರೆಯ ಕಾಲಕ್ಕೆ ಅಂತಃಕರಣವು ಹೃದಯಪ್ರದೇಶದಲ್ಲಿ ತೀರ ಮುದುಡಿಕೊಂಡು ಬಿಟ್ಟಿರುವದರಿಂದ ಆಭಾಸವು ಎಷ್ಟೂ ಮೂಡುವದಿಲ್ಲ. ಎಂತೆಯೇ ಆಗ ಚೇತನೆಯ ಯಾವ ವ್ಯವಹಾರವೂ ನಡೆದಿರುವದಿಲ್ಲ. ಆಗ "ನಾಡಿಗಳೊಳಗಿರುವ ಪಿತ್ತವೆಂಬ ಹೆಸರಿನ ಸೂರ್ಯನ ತೇಜಸ್ಸಿನಿಂದ ಮನಸು ಸೋತುಹೋಗಿರುವದರಿಂದ, ವಾಸನಾದ್ವಾರಗಳೆಲ್ಲ ಮುಚ್ಚಿಹೋಗಿರುವವು. ಮತ್ತು ಆಗ ಮನಸ್ಸಿನ ಕಿರಣಗಳು ಇಂದ್ರಿಯಗಳ ಸಹಿತ ಹೃದಯದಲ್ಲಿ ಸೆಳೆದುಕೊಳ್ಳಲ್ಪಡುತ್ತವೆ. ಯಾವಾಗ ಮನಸು (ಕಟ್ಟಿಗೆಯೊಳಗೆ ಬೆಂಕಿಯು ಸುಪ್ತವಾಗಿರುವಂತೆ) ದೇಹವನ್ನೆಲ್ಲ ವಿಶೇಷ ಜ್ಞಾನವಿಲ್ಲದೆ ವ್ಯಾಪಿಸಿ ನಿಂತಿರುವದೋ ಆಗ ಅದು (ಮನಸು) ಮಲಗಿಕೊಳ್ಳುತ್ತದೆ."*

ಇದರ ಅರ್ಥವೇನಂದರೆ:- ಸುಷುಪ್ತಿಯಲ್ಲಿ ಅಂತಃಕರಣವು ಹೃದಯದಲ್ಲಷ್ಟೇ ಮುದುಡಿಕೊಂಡು ನಿಂತಿರುವದರಿಂದ, ಅದು ಎಚ್ಚರಿಕೆ ಕನಸುಗಳಲ್ಲಿಯಂತೆ ವಿಶೇಷ ಜ್ಞಾನವನ್ನು ಪ್ರಕಟಿಸುವ ಶಕ್ತಿಯುಳ್ಳದ್ದಾಗಿರುವದಿಲ್ಲ. ಕಾರಣ ನಿದ್ರೆಯಲ್ಲಿ ಅಂತಃಕರಣವು ದೇಹವನ್ನೇ ಬಿಟ್ಟು ಎಲ್ಲಿಯಾದರೂ ಹೋಗುವದೆಂದು ಯಾರೂ ತಿಳಿಯಬಾರದು. ಆದರೆ ಆಗ ಆಭಾಸವೇ ಮೂಡದಂತಿರುವದರಿಂದ ಅದು ಇದ್ದೂ ಇಲ್ಲದಂತೆಯೇ ಸರಿ.

* ಪ್ರಶ್ನೋಪನಿಷದ್‌ಭಾಷ್ಯ ೪,೬ ನೋಡಿರಿ.

ಸಿದ್ಧಿಯಲ್ಲಿ ದೇಹಸಂಬಂಧವೇ ಇರುವದಿಲ್ಲೆಂದು ಹೇಳುವದೂ ಈ ದೃಷ್ಟಿಯಿಂದಲೇ ಸರಿ. ಅಂತಃಕರಣದ ಸಂಕೋಚವಿಕಾಸಗಳಿಗನುಸರಿಸಿ ಅದರೊಳಗೆ ಒಡಮೂಡುವ ಆತ್ಮನ ಆಭಾಸದ ಸಂಕೋಚವಿಕಾಸಗಳಿಂದಲೇ ಎಚ್ಚರಿಕೆ ಮೊದಲಾದ ಅವಸ್ಥೆಗಳು ಮೇಲೆ ಹೇಳಿದ ರೀತಿಯಲ್ಲಿಯೇ ಆಗುವವೆಂಬ ಬಗ್ಗೆ ಬೃಹದಾರಣ್ಯಕೋಪನಿಷದ್ಭಾಷ್ಯವನ್ನು (೨.೧.೧೯) ನೋಡಬಹುದು. ಇದೇ ಸಂದರ್ಭದಲ್ಲಿ ಬೃ. ಉಪನಿಷದ್ಭಾಷ್ಯದ (೨-೪-೧೧) ಭಾಗವೂ ಉಪಯುಕ್ತವಾಗದಿರದು.

ಮೇಲಿನ ವಿವರಣೆಯಿಂದ ಶರೀರದೊಳಗಿನ ಕ್ರಿಯಾಶಕ್ತಿಯೆಲ್ಲ 'ಅಚೇತನ' ಅಂತಃಕರಣ ಅಥವಾ ಪ್ರಾಣದ್ದೆಂದೂ, ಜ್ಞಾನಶಕ್ತಿಯೆಲ್ಲ 'ಸಚೇತನ' ಅಂತಃಕರಣದ್ದೆಂದೂ ಗೊತ್ತಾಗಿರಬಹುದು. ಅಂತಃಕರಣವೆಂಬ ಒಂದೇ ಉಪಾಧಿಯಿಂದ ಶರೀರದ ಎಲ್ಲ ವ್ಯಾಪಾರಗಳು ಹೇಗೆ ನಡೆಯುವವೆಂಬದು ಇದರಿಂದ ಸ್ಪಷ್ಟವಾಗಿರಬಹುದು.* ಇದರ ಮೇಲಿಂದ ಪ್ರಾಣಶಕ್ತಿಯಾದರೂ ದೇಹದ ತುಂಬೆಲ್ಲ ಇರುವದೆಂದು ತಿಳಿದಿರಬಹುದು. ದೇಹದೊಳಗೆ ಕೆಲಸ ಮಾಡುವ ವಾಯುವೇ ಪ್ರಾಣವೆಂದೆನಿಸಿಕೊಳ್ಳುವದೆಂದು ಶ್ರೀಮಚ್ಛಂಕರಾಚಾರ್ಯರ ಸಿದ್ಧಾಂತವಿದೆ. ಅದು ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನಗಳೆಂಬ ಐದು ಶಾಖೆಗಳಾಗಿ ದೇಹದ ಬೇರೆ ಬೇರೆ ಭಾಗಗಳನ್ನಾಶ್ರಯಿಸಿ ಅಲ್ಲಲ್ಲಿಯ ಕೆಲಸಗಳನ್ನು ಮಾಡುವದು. ಈ ಐದೂ ಪ್ರಾಣಭೇದಗಳನ್ನು ಕುರಿತು ಚರ್ಚಿಸುವ ಕಾರಣವಿಲ್ಲ. ಅವು ಯಾವ ಯಾವ ಸ್ಥಳಗಳಲ್ಲಿರುವವೆಂದೂ, ಯಾವ ಯಾವ ಕೆಲಸಗಳನ್ನು ಮಾಡುವವೆಂದೂ ವಿಚಾರಮಾಡಹತ್ತಿದರೆ, ವೇದಾಂತಿಗಳು

---

* ಮುಂಡಕೋಪನಿಷದ್ಭಾಷ್ಯ (೩.೧.೯) ಮತ್ತು ಬೃಹದಾರಣ್ಯಕೋಪನಿಷದ್ಭಾಷ್ಯ (೨.೪.೧೧) ಹಾಗೂ ಐತರೇಯೋಪನಿಷದ್ಭಾಷ್ಯ (೩.೨) ನೋಡಿರಿ. ಮಧುಸೂದನ ಸರಸ್ವತಿಯವರ “ಸಿದ್ಧಾಂತ ಬಿಂದು” ವ, ಮತ್ತು ಅದರ ಮೇಲಿನ ಶ್ರೀ. ಅಭ್ಯಂಕರ ಶಾಸ್ತ್ರಿಯವರ 'ಬಿಂದುಪ್ರಪಾತ'ವೆಂಬ ಟೀಕೆಯನ್ನೂ ನೋಡಬಹುದು.

ಬೇರೆ ಬೇರೆ ಉತ್ತರಗಳನ್ನು ಕೊಡುವರೆಂಬದು ತಿಳಿದುಬರುವಂತಿದೆ. ಅಂತಹ ಗೊಂದಲದ ಪ್ರಶ್ನೆಗಳಲ್ಲಿ ಸೇರುವದು ನಮ್ಮ ಉದ್ದೇಶವಿಲ್ಲ. ಪ್ರಾಣವಿಭಾಗಗಳ ವಿಶಿಷ್ಟ ಸ್ಥಾನ ಮತ್ತು ಕಾರ್ಯಗಳ ಬಗ್ಗೆ ಭಿನ್ನಾಭಿಪ್ರಾಯಗಳಿದ್ದರೂ, ಅವೆಲ್ಲ ಕೂಡಿ ಶರೀರದ ಕ್ರಿಯೆಗಳನ್ನೆಲ್ಲಾ ನಿರ್ವಹಿಸುವವೆಂಬ ಬಗ್ಗೆ ಮಾತ್ರ ಎಲ್ಲರದೂ ಐಕಮತ್ಯವಿದೆ. (ಈ ಬಗ್ಗೆ ಶ್ರೀಶಂಕರಾಚಾರ್ಯರ ಅಭಿಪ್ರಾಯವನ್ನು ತಿಳಿದುಕೊಳ್ಳಬೇಕೆನ್ನುವವರು (೨.೪.೧೨) ಮೇಲಿನ ಅವರ ಬ್ರಹ್ಮಸೂತ್ರ ಭಾಷ್ಯವನ್ನು ನೋಡಬೇಕು.)

ಇನ್ನು ಚೇತನಾಸಹಿತವಾದ ಅಂತಃಕರಣದ ಕಡೆಗೆ ಹೊರಡುವಾ. ವ್ಯವಹಾರದಲ್ಲಿ ಇದಕ್ಕೇ ಬಹುಶಃ ಅಂತಃಕರಣವೆಂಬ ಹೆಸರು ಕೊಡುವದುಂಟು. ಇದನ್ನು ನಾವು ಪೂರ್ಣವಾಗಿ ಲಕ್ಷ್ಯದಲ್ಲಿಟ್ಟರೆ ಮಾತ್ರ ವಿಷಯವು ಚನ್ನಾಗಿ ತಿಳಿಯಬಹುದು. ಇಲ್ಲವಾದರೆ ಎಲ್ಲವೂ ಗೊಂದಲವೇ ಸರಿ.

ಆತ್ಮನ ಉಪಾಧಿಯಾಗಿರುವಂತೆ ತೋರುವ ಅಂತಃಕರಣವು ಒಂದೇಯಾಗಿದ್ದು ಅದೇ ಮನಸ್ಸೆಂದೂ, ಬುದ್ಧಿಯೆಂದೂ, ವಿಜ್ಞಾನವೆಂದೂ, ಚಿತ್ತವೆಂದೂ ಬೇರೆ ಬೇರೆ ಕಡೆಗೆ ಬೇರೆ ಬೇರೆ ಹೆಸರಿನಿಂದ ಕರೆಯಲ್ಪಡುತ್ತದೆಂದು ಭಾಷ್ಯಕಾರರು ತಮ್ಮ ಬ್ರಹ್ಮಸೂತ್ರಭಾಷ್ಯದಲ್ಲಿ (೨.೩.೩೨) ಹೇಳಿದ್ದಾರೆ. ಅಂತಃಕರಣ ಮತ್ತು ಇಂದ್ರಿಯಗಳ ವಿಷಯವು ಬ್ರಹ್ಮಸೂತ್ರದ ೨ನೆಯ ಅಧ್ಯಾಯದೊಳಗೆ ೪ನೆಯ ಪಾದದ ೫ರಿಂದ ೭ರ ವರೆಗಿನ ಸೂತ್ರಗಳಲ್ಲಿ ವಿವರಿಸಲ್ಪಟ್ಟಿದೆ. ಅಲ್ಲಿ ಭಾಷ್ಯಕಾರರು ಹೇಳುವದೇನೆಂದರೆ:–

> ಸರ್ವಾರ್ಥವಿಷಯಂ ತ್ರೈಕಾಲ್ಯವೃತ್ತಿ ಮನಸ್ತು ಏಕಂ ಅನೇಕ ವೃತ್ತಿಕಮ್ । ತದೇವ ವೃತ್ತಿಭೇದಾತ್ ಕ್ವಚಿದ್ ಭಿನ್ನವದ್ ವ್ಯಪದಿಶ್ಯತೇ— ಮನೋಬುದ್ಧಿರಹಂಕಾರಶ್ಚಿತ್ತಂಚ ಇತಿ । ತಥಾ ಚ ಶ್ರುತಿಃ ಕಾಮಾದ್ಯಾಃ ನಾನಾವಿಧಾ ವೃತ್ತೀರನುಕ್ರಮ್ಯಾಹ ‘ಏತತ್ಸರ್ವಂ ಮನ ಏವ’ ಇತಿ ।

ಇದರ ಅರ್ಥವೇನಂದರೆ—ಅಂತಃಕರಣದ ವೃತ್ತಿಗಳು ಅನೇಕವಾಗಿ ರುತ್ತವೆ. ಅವುಗಳನ್ನೆಲ್ಲಾ ಸಂಪೂರ್ಣವಾಗಿ ಬಿಡಿಬಿಡಿಸಿ ಹೇಳುವದು ಅಶಕ್ಯವೇ ಸರಿ. ಚೇತನಾಯುಕ್ತ ವ್ಯವಹಾರಗಳೆಲ್ಲ ಇದರೊಳಗೇ ಬರುತ್ತವೆ. ಬಾಹ್ಯವಿಷಯುಗಳ ಆಕಾರವನ್ನು ತಳೆದ ಅಂತಃಕರಣ ಪರಿ ಣಾಮಕ್ಕೇ 'ವೃತ್ತಿ' ಎಂದೆನ್ನಬೇಕೆಂದು ಕೆಲಕೆಲವು ಗ್ರಂಥಗಳಲ್ಲಿ ಬರೆ ದಿದ್ದಾರೆ; ಆದರೆ ಅದು ತಪ್ಪು. **ಅಂತಃಕರಣದ ವಿಶೇಷ ರೂಪವೆಲ್ಲ "ವೃತ್ತಿ" ಎಂಬ ಹೆಸರಿನಿಂದ ಕರೆಯಲಿಕ್ಕೆ ಯೋಗ್ಯವಾಗಿರುತ್ತದೆ.** ಐತರೇಯೋಪನಿಷತ್ತಿನ ಕೊನೆಯ ಅಧ್ಯಾಯವನ್ನೂ, ಬೃಹದಾರಣ್ಯ ಕೋಪನಿಷತ್ತನ್ನೂ (೧.೫.೩) ನೋಡಿದರೆ ಈ ಮಾತು ಸ್ಪಷ್ಟವಾಗು ವಂತಿದೆ. ಐತರೇಯೋಪನಿಷತ್ತಿನಲ್ಲಿ "ಸಂಜ್ಞಾನವೆಂದರೆ ಚೇತನಭಾವ, ಆಜ್ಞಾನವೆಂದರೆ ಆಜ್ಞೆ, ವಿಜ್ಞಾನವೆಂದರೆ ಕಲೆಗಳ ಜ್ಞಾನ, ಪ್ರಜ್ಞಾನ ವೆಂದರೆ ಜಾಣತನ, ಮೇಧಾ ಅಂದರೆ ಓದಿದ್ದನ್ನು ನೆನಪಿನಲ್ಲಿಡುವ ಶಕ್ತಿ, ದೃಷ್ಟಿಯೆಂದರೆ ಇಂದ್ರಿಯುಗಳ ಮುಖಾಂತರವಾಗಿ ಎಲ್ಲ ವಿಷಯುಗಳ ಜ್ಞಾನವನ್ನು ಮಾಡಿಕೊಳ್ಳುವದು, ಧೃತಿ ಎಂದರೆ ಧೈರ್ಯ, ಉತ್ಸಾಹ ಅಥವಾ ಹುರುಪು, ಮತಿ ಅಂದರೆ ಮನನ, ಮನೀಷೆ ಅಂದರೆ ಸ್ವತಂತ್ರ ವಿಚಾರವು, ಜೂತಿ ಅಂದರೆ ರೋಗ ಮೊದಲಾದವುಗಳಿಂದ ಆಗುತ್ತಿರುವ ಮನಸ್ಸಿನ ದುಃಖಕರವಾದ ಸ್ಥಿತಿಯು, ಸ್ಮೃತಿಯೆಂದರೆ ಸ್ಮರಣವು, ಸಂಕಲ್ಪವೆಂದರೆ ಹೊರಗೆ ನೋಡಿದ ರೂಪಗಳನ್ನು ಬೆಳ್ಳಗೆಂದೂ ಕರ್‍ರ ಗೆಂದೂ ತಿಳಿದುಕೊಳ್ಳುವದು, ಕ್ರತು ಎಂದರೆ ನಿಶ್ಚಯವು, ಅಸು ಎಂದರೆ ಜೀವನಕ್ರಿಯೆಗೆ ಅವಶ್ಯವಾದ ವೃತ್ತಿಯು, ಕಾಮವೆಂದರೆ ದೊರಕದಿದ್ದ ಪದಾರ್ಥಗಳನ್ನು ಅಪೇಕ್ಷಿಸುವದು, ವಶವೆಂದರೆ ಹೆಂಗಸರ ಸಹವಾಸ ಮೊದಲಾದವುಗಳನ್ನು ಇಚ್ಛಿಸುವದು,—ಇವೆಲ್ಲ ಮನಸ್ಸೇ ಸರಿ" ಎಂದು ವರ್ಣಿಸಲ್ಪಟ್ಟಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಕೂಡ "ಕಾಮ, ಸಂಕಲ್ಪ, ವಿಚಿಕಿತ್ಸಾ ಅಥವಾ ಸಂಶಯಜ್ಞಾನ, ಶ್ರದ್ಧಾ, ಅಶ್ರದ್ಧಾ, ಧೃತಿ, ಅಧೃತಿ, ಹ್ರೀ ಅಥವಾ ಲಜ್ಜಾ, ಧೀ ಅಥವಾ ಬುದ್ಧಿ, ಭೀ ಅಥವಾ ಭಯ—ಇದೆಲ್ಲವೂ ಮನಸ್ಸೇ ಸರಿ" ಎಂದು ವರ್ಣಿಸಲ್ಪಟ್ಟಿದೆ. ಇದರ

ಮೇಲಿಂದ ಮನಸ್ಸು ಅಥವಾ ಅಂತಃಕರಣದ ಅಲುಗಾಟ ಅಥವಾ ಹೊಯ್ದಾಟವೆಲ್ಲ ನಿರಪವಾದವಾಗಿ ವೃತ್ತಿಯೆಂದು ಕರೆಸಿಕೊಳ್ಳುತ್ತ ದೆಂದೂ, ಇಂತಹ ವೃತ್ತಿಗಳು ಅಸಂಖ್ಯವಾಗಿರುವವೆಂದೂ ಗೊತ್ತಾ ಗುವಂತಿದೆ. ಇವುಗಳಲ್ಲಿ ಹೊರಗಿನ ವಿಷಯಗಳಿಗೆ ಸಂಬಂಧಿಸಿದವು ಗಳೆಂದೂ, ಒಳಗಿನ ವಿಷಯಗಳಿಗೆ ಸಂಬಂಧಿಸಿದವುಗಳೆಂದೂ ಎರಡು ತರವು. ಆದರೆ ಎಲ್ಲವೂ ವೃತ್ತಿಗಳೆಂಬ ದೃಷ್ಟಿಯಿಂದ ಒಂದೇ. ಮನಸ್ಸು ಸ್ವಾಭಾವಿಕವಾಗಿಯೇ ಚಂಚಲವಾಗಿರುವ ಕಾರಣ ಈ ವೃತ್ತಿಗಳು ಪ್ರತಿ ಕ್ಷಣದಲ್ಲಿಯೂ ಬದಲಾಗುತ್ತಿರುತ್ತವೆ. ಎಂತೆಯೇ ಅವುಗಳಲ್ಲಿ ಪ್ರತಿ ಯೊಂದಕ್ಕೂ ಉತ್ಪತ್ತಿ, ಸ್ಥಿತಿ, ಲಯಗಳುಂಟು. ಆದರೆ ಈ ಉತ್ಪತ್ತಿ ಸ್ಥಿತಿ ಲಯಗಳು ತೀರ ಅಲ್ಪ ಕಾಲೀನವೆಂಬದು ತೀರ ಸ್ಪಷ್ಟವಾಗಿದೆ. ಎಂತೆಯೇ ಎಷ್ಟೋ ಜನರಿಗೆ ವೃತ್ತಿಗಳ ಹುಟ್ಟು ಸಾವುಗಳ ಕಲ್ಪನೆಯೂ ಕೂಡಾ ಬರುವದು ಕಷ್ಟವಾಗುತ್ತದೆ. ಆದರೆ ಈ ವಿಷಯವನ್ನು ಚನ್ನಾಗಿ ತಿಳಿದುಕೊಂಡ ಹೊರತು ಗತ್ಯಂತರವಿಲ್ಲ. 'ವೃತ್ತಿಗಳ' ನಿಜವಾದ ಜ್ಞಾನ ಅಥವಾ ಅನುಭವವಾದ ಹೊರತು ಆತ್ಮಜ್ಞಾನವಾಗುವದೇ ಶಕ್ಯವಿಲ್ಲ. ಈ ವೃತ್ತಿಗಳಿಗೆ "ಬೋಧ"ವೆಂದೂ ಬುದ್ಧಿಯ "ಪ್ರತ್ಯಯ" ಗಳೆಂದೂ ಹೆಸರು.

ಇಲ್ಲಿಯ ವರೆಗಿನ ವಿವರಣೆಯ ಸಾರಾಂಶವೇನೆಂಬದನ್ನು ಲಕ್ಷ್ಯ ದಲ್ಲಿಡುವುದು ಆವಶ್ಯಕವು. ಜೀವಾತ್ಮನ ಉಪಾಧಿಯು ಅಂತಃಕರಣ ವೆಂಬದೊಂದೇ ಇದ್ದು ಅದರಲ್ಲಿ ಜ್ಞಾನಕ್ರಿಯಾ ಶಕ್ತಿಗಳೆರಡೂ ಬೇರ್ಪಡಿ ಸಲಿಕ್ಕೆ ಬಾರದಂತೆ ಅಡಗಿರುವವು. ಕ್ರಿಯಾಶಕ್ತಿಯೇ ಸಾಮಾನ್ಯವಾಗಿ 'ಅಚೇತನ'ವೆನಿಸಿಕೊಳ್ಳುವ ಎಲ್ಲ ಕ್ರಿಯೆಗಳಿಗೂ, ಕಿಂಬಹುನಾ, ಅಲು ಗಾಟಕ್ಕೂ ಕಾರಣವಾಗಿದ್ದು ಅದಕ್ಕೆ ಪ್ರಾಣವೆಂದು ಹೆಸರು ಕೊಡುವ ವಾಡಿಕೆಯುಂಟು. ಪ್ರಾಣವೃತ್ತಿಗಳು ಹಲವಾಗಿದ್ದರೂ ಅವುಗಳನ್ನೆಲ್ಲ ಪ್ರಾಣಾಪಾನ ಮೊದಲಾದ ಐದು ವರ್ಗಗಳಲ್ಲಿ ಅಥವಾ ಹತ್ತು ವರ್ಗಗಳಲ್ಲಿ ವಿಭಾಗಿಸುವ ಸಂಪ್ರದಾಯವಿದೆ. ಅಂತಃಕರಣದ ಜ್ಞಾನಶಕ್ತಿಯು

'ಸಚೇತನ'ವೆನಿಸಿಕೊಳ್ಳುವ ಎಲ್ಲ ವ್ಯಾಪಾರಗಳಿಗೂ ಮೂಲವಾಗಿದ್ದು ಅದಕ್ಕೆ 'ಮನಸು' ಅಥವಾ ಬುದ್ಧಿಯೆಂದು ಹೆಸರು ಕೊಡುತ್ತಾರೆ. ಈ ಮನೋವೃತ್ತಿಗಳು ಅಸಂಖ್ಯವಾಗಿದ್ದು ಅವುಗಳಿಗೆ ಮೇಲೆ ಹೇಳಿದಂತೆ ಬೋಧಗಳೆಂದೂ ಪ್ರತ್ಯಯಗಳೆಂದೂ ಹೆಸರು. ಈ ಪ್ರಾಣವೃತ್ತಿ ಮತ್ತು ಮನೋವೃತ್ತಿಗಳೆರಡೂ ಸಮಗೆ ತಿಳಿಯುವದರಿಂದ ಇವೆರಡರ ಆಚೆಗೆ ಇವುಗಳಿಗೆಲ್ಲ ಸಾಕ್ಷಿಯಾಗಿರುವ ತಿಳಿವಳಿಕೆಯ ಸ್ವರೂಪದ ವಸ್ತುವೊಂದು ಇರಬೇಕೆಂದು ಸಿದ್ಧವಾಗುತ್ತದೆ. ಅದೇ ಬ್ರಹ್ಮ ಅಥವಾ ಆತ್ಮವು. ಆದುದರಿಂದ ಆತ್ಮಜ್ಞಾನ ಮಾಡಿಕೊಳ್ಳಲಿಕ್ಕೆ ಬೇಕಾಗುವ ಸಾಧನಗಳಾವ ವೆಂಬದೂ ಇದರಿಂದ ಸುಲಭವಾಗಿ ತಿಳಿಯುವಂತಿದೆ. ಪ್ರಾಣವೃತ್ತಿಯ ನಿಯಮನ ಮಾಡಿ ಅದಕ್ಕೆ ಸಾಕ್ಷಿಯಾಗಿ ಉಳಿಯಲೆತ್ನಿಸಿದರೆ ಯಾವ ಫಲವು ಸಿಕ್ಕಬೇಕೋ ಅದೇ ಫಲವು ಮನೋವೃತ್ತಿಯ ನಿಯಮನ ಮಾಡಿ ಅದಕ್ಕೆ ಸಾಕ್ಷಿಯಾಗಿ ಉಳಿದರೂ ಸಿಕ್ಕುವದು. ಈ ದ್ವಿವಿಧವೃತ್ತಿಗಳ ಮೂಲಕವಾಗಿಯೇ ಬೇರೆ ಬೇರೆ ಸಾಧನಕ್ರಮಗಳು ಅಸ್ತಿತ್ವದಲ್ಲಿ ಬಂದಿವೆ. ಯಾರಿಗೆ ಯಾವುದು ಸುಲಭವಾಗುವದೋ ಅವರು ಅದನ್ನು ಅನುಸರಿಸಬಹುದು. ಕೆಲವರಿಗೆ ಯೋಗವು ಸುಲಭವಾಗಬಹುದು. ಅವರು ಪ್ರಾಣವೃತ್ತಿಯ ಸಹಾಯದಿಂದ ಬ್ರಹ್ಮಜ್ಞಾನವನ್ನು ಪಡೆಯ ಬಹುದು. ಮತ್ತೆ ಕೆಲವರಿಗೆ ಸಾಂಖ್ಯವೆಂದರೆ ಜ್ಞಾನಮಾರ್ಗವು ಸುಲಭ ವಾಗಬಹುದು. ಅವರು ಮನೋವೃತ್ತಿಯ ಅಭ್ಯಾಸದಿಂದ ಬ್ರಹ್ಮಜ್ಞಾನ ವನ್ನು ಪಡೆಯಬಹುದು. ಬೇಕಾದವರು ಎರಡೂ ರೀತಿಯಿಂದ ಅಭ್ಯಾಸ ಮಾಡಿ ಎರಡೂ ರೀತಿಗಳಿಗೆ ಒಂದೇ ಫಲವು ಸಿಕ್ಕುವದೆಂಬುದನ್ನು ಮನ ಗಾಣಬಹುದು. ಸಾರಾಂಶವೇನೆಂದರೆ—ತಮ್ಮ ತಮ್ಮ ಪ್ರಕೃತಿಯ ಮಾಸಕ್ಕನುಸರಿಸಿ ಸಾಧನಕ್ರಮಗಳನ್ನು ಆರಿಸಿಕೊಳ್ಳಬೇಕು. ಯಾವದೇ ರೀತಿಯಿಂದಾಗಲೊಲ್ಲದೇಕೆ, ಬ್ರಹ್ಮಜ್ಞಾನವೊಂದು ಆದರೆ ಸಾಕು.

ಇನ್ನು ಪುನಃ ಬೋಧ, ಪ್ರತ್ಯಯ ಅಥವಾ ಜ್ಞಾನವೃತ್ತಿಗಳ ಕಡೆಗೇ ಹೊರಳುವ. ಯಾಕೆಂದರೆ ಆತ್ಮಸಾಕ್ಷಾತ್ಕಾರಕ್ಕೆ ಇವೇ ಸಾಧನ

ವೆಂದು ಶ್ರೀಶಂಕರಭಗವತ್ಪಾದರವರು ಕೇನೋಪನಿಷತ್ತಿನ ಪದ ಭಾಷ್ಯದಲ್ಲಿ ಸ್ಪಷ್ಟವಾಗಿಯೇ ಹೇಳಿದ್ದಾರೆ. ಕೇನೋಪನಿಷತ್ತಿನ ಎರಡ ನೆಯ ಖಂಡದ ನಾಲ್ಕನೆಯ ಮಂತ್ರದ ಮೇಲೆ ಭಾಷ್ಯ ಬರೆಯುವಾಗ ಅವರು ಅಪ್ಪಣೆ ಕೊಡಿಸಿರುವದೇನೆಂದರೆ—

**ಸರ್ವೇ ಪ್ರತ್ಯಯಾ ವಿಷಯೀಭವಂತಿ ಯಸ್ಯ ಸ ಆತ್ಮಾ ಸರ್ವ ಬೋಧಾನ್ ಪ್ರತಿಬುಧ್ಯತೇ ಸರ್ವ ಪ್ರತ್ಯಯದರ್ಶೀ ಚಿಚ್ಛಕ್ತಿಸ್ವರೂಪ ಮಾತ್ರಃ ಪ್ರತ್ಯಯೈರೇವ ಪ್ರತ್ಯಯೇಷ್ವವಿಶಿಷ್ಟತಯಾ ಲಕ್ಷ್ಯತೇ, ನಾನ್ಯ ದ್ದ್ವಾರಮಾತ್ಮನೋ ವಿಜ್ಞಾನಾಯ ।**

ಇದರ ಅರ್ಥವಿಷ್ಟೇ-ಆತ್ಮನು ನಿತ್ಯಚಿತ್ಸ್ವರೂಪನಾಗಿದ್ದಾನೆ. ನಮಗೆ ಜ್ಞಾನದ ಅನುಭವವುಂಟಾಗುವದೆಲ್ಲ ಈ ವೃತ್ತಿಗಳ ಮೂಲಕವಾಗಿಯೇ ಸರಿ. ಇಷ್ಟೇ ಅಲ್ಲ, ನಮ್ಮ ವ್ಯಾವಹಾರಿಕ ಜ್ಞಾನವೆಂದರೆ ಈ ವೃತ್ತಿ ಗಳೇ. ಎಚ್ಚರಿಕೆ ಕನಸುಗಳಲ್ಲಿ ಈ ವೃತ್ತಿಗಳಿರುವದರಿಂದ, ಆಗ ಜ್ಞಾನ ವಿರುವದೆಂದೂ, ನಿದ್ರೆಯಲ್ಲಿ ಇರದಿರುವದರಿಂದ ಆಗ ಜ್ಞಾನವಿರುವದಿಲ್ಲ ವೆಂದೂ ನಾವು ಹೇಳುತ್ತೇವೆ. **ಆದುದರಿಂದ ನಿತ್ಯಜ್ಞಾನಸ್ವರೂಪ ನಾದ ಆತ್ಮನ ಅನುಭವವಾಗಲಿಕ್ಕೆ ಕ್ಷಣಿಕ ಜ್ಞಾನಗಳಾದ ವೃತ್ತಿಗಳೇ ಲಕ್ಷಣಗಳು—ಸಾಧನಗಳು. ಇವುಗಳನ್ನು ಬಿಟ್ಟರೆ ಆತ್ಮನ ಜ್ಞಾನ ಮಾಡಿಕೊಳ್ಳಲಿಕ್ಕೆ ಬೇರೆ ಮಾರ್ಗವೇ ಇರುವದಿಲ್ಲ.** ನಮ್ಮ ವ್ಯವ ಹಾರವೆಲ್ಲ ಈ ವೃತ್ತಿಗಳ ಮುಖಾಂತರವಾಗಿಯೇ ನಡೆಯುವದೆಂಬುದು ಸ್ಪಷ್ಟವಿದೆ. ಇವುಗಳ ಮೂಲಕವೇ ಆತ್ಮಾನಾತ್ಮಗಳು ಒಂದಕ್ಕೊಂದು ಕೂಡಿಕೊಂಡಂತೆ ಕಾಣುವವು. ಇವುಗಳಿಂದಲೇ ಆತ್ಮಾನಾತ್ಮಗಳ ಅವಿವೇಕವುಂಟಾಗಲಿಕ್ಕೆ ಕಾರಣವಾಗಿ ಜನರು ಸಂಸಾರದಲ್ಲಿ ಹೊರಳಾಡ ಬೇಕಾಗುವದು. ಆದರೆ ಇಷ್ಟಿದ್ದರೂ, ಇವು **ಸಾಕ್ಷಾತ್ತಾಗಿ** ಆತ್ಮನನ್ನು ತಿಳಿಸಿಕೊಡಲಾರವೆಂಬದನ್ನು ಲಕ್ಷ್ಯದಲ್ಲಿಡಬೇಕು.* ನಾವು ಕಳೆದು

---

* ಉಪದೇಶಸಾಹಸ್ರಿಯ ಪದ್ಯಭಾಗದೊಳಗೆ 'ತತ್ತ್ವಮಸಿ' ಪ್ರಕರಣದ ೩ನೆಯ ಶ್ಲೋಕವನ್ನು ನೋಡಿರಿ.

ಹೋದ ದನಗಳನ್ನು ಅವುಗಳ ಹೆಜ್ಜೆಯ ಗುರುತುಗಳಿಂದ ಹುಡುಕಿಕೊಂಡು ಬರುವಂತೆ ಆತ್ಮನನ್ನು ಈ ವೃತ್ತಿಗಳಿಂದ ಹುಡುಕಬೇಕೆಂದು ಬೃಹದಾರಣ್ಯಕದಲ್ಲಿ (೧.೪.೭) ಹೇಳಿದೆ. ಆದರೆ ಹೆಜ್ಜೆಗಳೇ ದನಗಳೆಂದು ಹೇಗೆ ತಿಳಿಯಲಾಗದೋ, ಹಾಗೆ ವೃತ್ತಿಗಳೇ ಆತ್ಮನೆಂದು ಭ್ರಮಿಸಬಾರದು.

ಇವುಗಳಲ್ಲಿ ಪ್ರತಿಯೊಂದು ವೃತ್ತಿಯ ಸ್ವರೂಪವೇನು ? ವೃತ್ತಿಯ ಕಲ್ಪನೆ ಬರುವದಕ್ಕಾಗಿ ಒಂದು ದೃಷ್ಟಾಂತವನ್ನು ಕೊಡಬಹುದು. ಕನ್ನಡಿಯ ಮೇಲೆ ಪ್ರಕಾಶವು ಬಿದ್ದೊಡನೆ ಆದರಿಂದ ಹೊರಡುವ ಪ್ರತಿಚ್ಛಾಯೆಯಂತೆ ವೃತ್ತಿಯೂ ಇರುತ್ತದೆಂದು ಹೇಳಬಹುದು. ಆತ್ಮವು ಚೈತನ್ಯ ರೂಪವಿದ್ದು, ಕನ್ನಡಿಯೋಪಾದಿಯಲ್ಲಿರುವ ಅಂತಃಕರಣದ ಮೇಲೆ ಅದರ ಜ್ಞಾನವು ಬಿದ್ದೊಡನೆ, ಅಂತಃಕರಣದೊಳಗಿಂದ ಹೊರಡುವ ಚೈತನ್ಯದ ಆಭಾಸ ಅಥವಾ ಪ್ರತಿಚ್ಛಾಯೆಯೇ ವೃತ್ತಿಯೆಂದು ಇದರ ಅರ್ಥವು. **ಉಪದೇಶಸಾಹಸ್ರಿಯೊಳಗೆ** 'ತತ್ವಮಸಿ' ಪ್ರಕರಣದಲ್ಲಿ ಶ್ರೀಶಂಕರಾಚಾರ್ಯರವರು ಈ ಮಾತನ್ನು ತೀರ ಸ್ಪಷ್ಟವಾಗಿ, ವಿಸ್ತಾರವಾಗಿ, ಸುಂದರವಾಗಿ, ಮನದಟ್ಟಾಗುವಂತೆ ಬಿಚ್ಚಿ ಹೇಳಿದ್ದಾರೆ. ಉದಾಹರಣೆಗಾಗಿ ಅಲ್ಲಿ ೪೩,೭೦,೭೧ ಇವೇ ಮೊದಲಾದ ಶ್ಲೋಕಗಳನ್ನು ನೋಡಬಹುದು. **ಪಂಚದಶಿಯೊಳಗೆ** 'ಕೂಟಸ್ಥದೀಪ'ದೊಳಗೂ ಶ್ರೀ ವಿದ್ಯಾರಣ್ಯರು ಇದೇ ವಿವರವನ್ನು ಬಲು ಚನ್ನಾಗಿ ವಿವೇಚನೆ ಮಾಡಿದ್ದಾರೆ. ಇದರ ಮೇಲಿಂದ ವೃತ್ತಿಯು ಕೇವಲ ಜಡವೆಂದಾಗಲಿ, ಕೇವಲ ಚೈತನ್ಯವೆಂದಾಗಲಿ ಹೇಳಲಿಕ್ಕೆ ಬರಲಾರದೆಂಬದು ತಿಳಿಯುವಂತಿದೆ. ಜಡವೆನ್ನಬೇಕೇ? ಚೈತನ್ಯದಂತೆ ಕಾಣುವದು. ಚೈತನ್ಯವೆನ್ನಬೇಕೇ? ಜಡದ ಆಧಾರದಿಂದಲೇ ಅದು ಇದ್ದುಕೊಂಡು, ಜಡದಂತೆ ಹುಟ್ಟು ಸಾವುಗಳಿಗೀಡಾಗುವದು. ಆದುದರಿಂದ ಅದು ಚೇತನಾಚೇತನವೆಂದೇ ಹೇಳಬೇಕಾಗುತ್ತದೆ. ಕನ್ನಡಿಯ ಮೇಲೆ ಪ್ರಕಾಶವು ಬಿದ್ದೊಡನೆ ಕನ್ನಡಿಯಿಂದ ಹೊರಡುವ ಪ್ರತಿಚ್ಛಾಯೆಯು ಮೂಲ

ಪ್ರಕಾಶವೆಂದಾಗಲಿ ಅಥವಾ ಕೇವಲ ಕನ್ನಡಿಯ ಧರ್ಮವೆಂದಾಗಲಿ ಹೇಳಲಿಕ್ಕೆ ಬರಲಾರದು. ಎಂತೆಯೇ ಬೌದ್ಧರು "ವೃತ್ತಿಗಳು ಅಥವಾ ಕ್ಷಣಿಕ ವಿಜ್ಞಾನಗಳೇ ನಿಜವಾದ ವಸ್ತುಗಳೆಂದೂ, ಅವಕ್ಕೆಲ್ಲ ಸಾಕ್ಷಿಯಾಗಿರುವವನೊಬ್ಬನು ಇರಲೇಬೇಕೆಂಬದು ಸಿದ್ಧವಾಗುವದಿಲ್ಲೆಂ"ದೂ (ಉಪದೇಶಸಾಹಸ್ರಿ, ತತ್ತ್ವಮಸಿ ಪ್ರಕರಣದ ೭೨ನೆಯ ಶ್ಲೋಕ) ವಾದಿಸುತ್ತಾರೆ. ಇದೇ ಕಾರಣದಿಂದ ತಾರ್ಕಿಕರು "ಜ್ಞಾನವು ಮಾಡಲ್ಪಡುವದು ಅಥವಾ ಹುಟ್ಟುವದು" (ಮೇಲಿನ ಪ್ರಕರಣದ ೬೮ನೆಯ ಶ್ಲೋಕ) ಎಂದೂ ಹೇಳುತ್ತಾರೆ. ಕಿಂಬಹುನಾ, ಈ ಮೂಲಕವಾಗಿಯೇ "ಜೀವೇಶ್ವರ-ಪರಮಾತ್ಮಭೇದ ಕಲ್ಪನೆ"ಯೂ ತತ್ತ್ವಶಾಸ್ತ್ರದೊಳಗಿನ ವಿವಾದಾಸ್ಪದವಾದ ಉಳಿದ ವಿಷಯಗಳೂ ಹುಟ್ಟುವವೆಂದು ಶ್ರೀಶಂಕರಭಗವತ್ಪಾದರು ತಮ್ಮ ಐತರೇಯೋಪನಿಷದ್‌ಭಾಷ್ಯದಲ್ಲಿ ಯಥಾರ್ಥವಾಗಿಯೇ ಹೇಳಿದ್ದಾರೆ. ಇರಲಿ. ಈ ವೃತ್ತಿಯು ಯಾವ ಪದಾರ್ಥದ ಮೇಲೆ ಬೀಳುವದೋ ಆ ಪದಾರ್ಥವು ತಿಳಿಯಲ್ಪಡುತ್ತದೆ. ಈ ವೃತ್ತಿಯ ಮೂಲಭಾಗಕ್ಕೆ "ಜ್ಞಾತಾ" ಮೊದಲಾದ ತ್ರಿಪುಟಿಯೊಳಗಿನ ಕರ್ತೃವೆಂದೂ, ಮಧ್ಯಭಾಗಕ್ಕೆ ಕರಣವೆಂದೂ, ಕೊನೆಯ ಭಾಗಕ್ಕೆ ವಿಷಯವೆಂದೂ ಹೆಸರು. ತ್ರಿಪುಟಿಯೊಳಗಿನ ಮೂರು ಭಾಗಗಳು ಏಕಕಾಲದಲ್ಲಿಯೇ ಹುಟ್ಟುವವೆಂದು ಸಾಮಾನ್ಯವಾಗಿ ಎಲ್ಲರೂ ತಿಳಿಯುತ್ತಾರೆ. ಆದರೆ ಅದು ಸರಿಯಲ್ಲ. ಕನ್ನಡಿಯೊಳಗಿಂದ ಪ್ರತಿಚ್ಛಾಯೆಯು ಅತಿ ತೀವ್ರವಾಗಿಯಾದರೂ, ಕ್ರಮವಾಗಿಯೇ ಹುಟ್ಟುವಂತೆ, ತ್ರಿಪುಟಿಯೊಳಗಿನ ಭಾಗಗಳಾದರೂ ಕ್ರಮವಾಗಿಯೇ ಹುಟ್ಟುವವೆಂದು ಶ್ರೀಶಂಕರಾಚಾರ್ಯವರ್ಯರು ತಮ್ಮ **ಉಪದೇಶಸಾಹಸ್ರಿಯ** 'ತತ್ತ್ವಮಸಿ' ಪ್ರಕರಣದಲ್ಲಿ ಸಿದ್ಧಮಾಡಿದ್ದಾರೆ. ಈ ಸಂದರ್ಭದಲ್ಲಿ ಆ ಪ್ರಕರಣದ ೧೪ನೆಯ ಶ್ಲೋಕವನ್ನು ನೋಡಬಹುದು. ಹೀಗೆ ಪ್ರತಿಯೊಂದು ವೃತ್ತಿಯ ಸ್ವರೂಪವಿದ್ದರೂ, ವೃತ್ತಿಯ ವಿಷಯದ ಮೇಲಿಂದಲೇ ವೃತ್ತಿಗೆ ಹೆಸರು ಕೊಡುತ್ತಿರುವರೆಂದು ಅನುಭವದಿಂದ ಗೊತ್ತಾಗುವ ಮಾತಾಗಿದೆ. ಉದಾ:- ಸುಖವೃತ್ತಿ, ದುಃಖವೃತ್ತಿ. ಇಷ್ಟೇ ಅಲ್ಲ, ಕೊನೆಯ 'ವೃತ್ತಿ' ಶಬ್ದ

ವನ್ನು ಸಹ ತೆಗೆದುಹಾಕಿ ಸುಖ, ದುಃಖ ಎಂದಿಷ್ಟೇ ಹೆಸರಿನಿಂದ ಆ ವೃತ್ತಿಗಳನ್ನು ನಿರ್ದೇಶ ಮಾಡುತ್ತಿರುತ್ತಾರೆ. ಅದರಂತೆಯೇ ಮೇಜು, ಕುರ್ಚಿ ಮೊದಲಾದ ಎಲ್ಲ ವಿಷಯುಗಳೂ ಸರಿ. ಈ ದೃಷ್ಟಿಯಿಂದ ನೋಡಿ ದರೆ, ವೃತ್ತಿಗಳು ಪ್ರತಿಕ್ಷಣಕ್ಕೆ ಬದಲಾಗುತ್ತ ಹೋದರೂ, ಅವುಗಳಿಗೆಲ್ಲ ಮೂಲವಾದ 'ಅಹಂ' ಎಂಬ ಕರ್ತೃವು ಒಂದೇ ಆಗಿ ಉಳಿಯುವದೆಂದೂ, ಅದೇ 'ಪ್ರಮಾತಾ' ಎಂದೂ, ಶ್ರೀಸುರೇಶ್ವರಾಚಾರ್ಯರು ತಮ್ಮ ವಾರ್ತಿಕದಲ್ಲಿ ಹೇಳಿರುವದು ಸರಿಯೆನ್ನಲಿಕ್ಕೆ ಅಡ್ಡಿಯಿಲ್ಲ.

**ಸ್ಮೃತಿ ನಿಶ್ಚಿತಿ ಸಂಶೀತಿ ರಾಗಾದಿಹಿರುಗಾತ್ಮಸು ।**
**ಅಹಂ ರೂಪೇಣ ಯೋಽನ್ವೇತಿ ಸ ಪ್ರಮಾತಾ ಪರೋಮತಃ ।**

ಇದರ ಅರ್ಥವಿಷ್ಟೇ: ಸ್ಮರಣ, ನಿಶ್ಚಯ, ಸಂಶಯ, ಪ್ರೀತಿ ಮೊದಲಾದ ಬೇರೆ ಬೇರೆ ವೃತ್ತಿಗಳೊಳಗೆಲ್ಲ ಯಾವುದು ಎಡೆಬಿಡದೆ ಕರ್ತೃವಾಗಿರು ವದೋ ಅದಕ್ಕೇ ಪ್ರಮಾತಾ ಎಂದು ಹೆಸರು. ನಾನು ನೋಡಿದೆನು, ನಾನು ತಿಂದೆನು, ನಾನು ಮಲಗಿದೆನು—ಎಂದು ಮೊದಲಾಗಿ ವೃತ್ತಿಗಳು ಬದಲಾಗುತ್ತಿದ್ದರೂ 'ನಾನು, ನಾನೆಂ'ದು ಎಲ್ಲದರಲ್ಲಿಯೂ ಅನ್ವಯಿಸು ವದೇ ಪ್ರಮಾತಾ ಎಂದೆನ್ನಿಸಿಕೊಳ್ಳುವದು.

ಹೀಗೆ ವಿಷಯುಗಳ ಹೆಸರಿನಿಂದ ಪ್ರಸಿದ್ಧವಾಗಿರುವ ಅಂತಃಕರಣದ ವೃತ್ತಿಗಳು ಅಸಂಖ್ಯವಾಗಿದ್ದರೂ ಅವುಗಳನ್ನೆಲ್ಲ ಅಹಂಕಾರ, ಮನಸು, ಚಿತ್ತ ಮತ್ತು ಬುದ್ಧಿ ಎಂಬ ನಾಲ್ಕು ವರ್ಗಗಳಲ್ಲಿ ವಿಂಗಡಿಸುವದು ವಾಡಿಕೆ ಯಾಗಿದೆ. 'ನಾನೆಂ'ಬುವದೇ ಅಹಂಕಾರವು. ಸಂಕಲ್ಪ ವಿಕಲ್ಪಗಳನ್ನು ಮಾಡುವದೇ ಮನಸ್ಸು. ಹಿಂದಿನ ಸಂಗತಿಗಳನ್ನು ಚಿಂತನ ಮಾಡುವದೇ ಚಿತ್ತವು, ನಿಶ್ಚಯಮಾಡುವದೇ ಬುದ್ಧಿಯು. ಒಂದೇ ಅಂತಃಕರಣವು ಬೇರೆ ಬೇರೆ ಕೆಲಸಗಳನ್ನು ಮಾಡುವಾಗ, ಆಯಾ ಕೆಲಸಗಳ ದೃಷ್ಟಿಯಿಂದ ಅದಕ್ಕೆ ಈ ಬೇರೆ ಬೇರೆ ಹೆಸರುಗಳು ಕೊಡಲ್ಪಡುತ್ತವೆ. ಒಬ್ಬನೇ ಮನುಷ್ಯನು ಬೇರೆ ಬೇರೆ ಕೆಲಸಗಳನ್ನು ಮಾಡುವಾಗ ಒಮ್ಮೆ ವಕೀಲ ನೆಂದೂ, ಮತ್ತೊಮ್ಮೆ ವೈದ್ಯನೆಂದೂ, ಇನ್ನೊಮ್ಮೆ ಗಿರಾಕಿಯೆಂದೂ,

ಮತ್ತೊಂದು ಸಲ ಪ್ರವಚನಕಾರನೆಂದೂ ಕರೆಯಲ್ಪಡುತ್ತಾನೆ. ಹಾಗೆಯೇ ಅಂತಃಕರಣದ ಮಾತು. ಅದರಲ್ಲಿ ಒಂದು ವೃತ್ತಿಯು ಎದ್ದ ಕಾಲಕ್ಕೇನೇ ಮತ್ತೊಂದು ವೃತ್ತಿಯು ಏಳುವದು ಸರ್ವಥಾ ಶಕ್ಯವಿಲ್ಲ. ಈ ಮಾತನ್ನು ವಿಚಾರಮಾಡಿ ಅನುಭವಿಸಿ ನಿಶ್ಚಯಿಸಬೇಕು. ಅದುದ ರಿಂದ ಮೇಲೆ ಹೇಳಿದ ಅಂತಃಕರಣದ ನಾಲ್ಕು ವೃತ್ತಿಗಳಲ್ಲಿ ಒಂದು ವೃತ್ತಿ ಎದ್ದಾಗ ಅದೇ ಕಾಲಕ್ಕೆ ಮತ್ತೊಂದು ವೃತ್ತಿ ಇರಲಾರದೆಂದು ಲಕ್ಷ್ಯದಲ್ಲಿ ಡಬೇಕು. ಈ ಮಾತು ತಿಳಿಯದಿರುವದರಿಂದ ಎಷ್ಟೋ ಜನರು ಗೊಂದಲ ದಲ್ಲಿ ಬೀಳುವದುಂಟು. ಆದರೆ ಅಂತಃಕರಣವು ಬಹು ವೇಗದಿಂದ ಕೆಲಸ ಮಾಡುತ್ತಿರುವದರಿಂದ ಒಂದೊಂದು ಸಾರೆ ಒಂದೇ ಕಾಲಕ್ಕೆ ಹಲವು ವೃತ್ತಿಗಳಿರುವವೆಂಬ ತಪ್ಪುತಿಳುವಳಿಕೆಯಾಗುವ ಸಂಭವವಿದೆ. ಸಾರಾಂಶ ವೇನೆಂದರೆ ಸಾಧಕರು ಇಲ್ಲಿ ಬಹು ಹುಷಾರಾಗಿರಬೇಕು.

ಇಂದ್ರಿಯಗಳ ಮುಖಾಂತರವಾಗಿ ಅಂತಃಕರಣವು ಕೆಲಸಮಾಡು ವಾಗ, ಅದು ಸಾಮಾನ್ಯವಾಗಿ 'ಅಹಂ-ಅಥವಾ ನಾನು' ಎಂಬ ರೂಪ ಅಥವಾ ವೃತ್ತಿಯನ್ನು ತಳೆಯುತ್ತದೆ. ಎಂದರೆ ಹೊರಗಿನ ಜಗತ್ತಿನೊಡನೆ ವ್ಯವಹಾರವಾಗಬೇಕಾದಾಗೆಲ್ಲ ಈ 'ಅಹಂ' ಎಂಬದು ಬೇಕೇಬೇಕು. 'ನಾನೆ'ಂಬ ಕಲ್ಪನೆಯು ಎದ್ದ ವಿನಾ ವ್ಯವಹಾರವಾಗುವದೇ ಶಕ್ಯವಿಲ್ಲ. ಈ 'ನಾನೆ'ಂಬ ಕಲ್ಪನೆಯು ಸಾಧಾರಣವಾಗಿ ದೇಹವನ್ನು ವಿಷಯೀ- ಕರಿಸುತ್ತದೆ. ಎಂದರೆ ನಾವೆಲ್ಲರೂ 'ದೇಹವೇ ನಾವು' ಎಂದು ತಿಳಿದು ಕೊಂಡೇ ವ್ಯವಹಾರದಲ್ಲಿ ಪ್ರವೃತ್ತರಾಗುತ್ತೇವೆ. ಎಂತೆಯೇ ಭಾಷ್ಯ ಕಾರರು ತಮ್ಮ ಬ್ರಹ್ಮಸೂತ್ರಭಾಷ್ಯದ ಪ್ರಾರಂಭದ ಭಾಗದಲ್ಲಿಯೇ, ''ನ ಚಾನಧ್ಯಸ್ತಾತ್ಮಭಾವೇನ ದೇಹೇನ ಕಶ್ಚಿದ್ ವ್ಯಾಪ್ರಿಯತೇ'' ಎಂದು ಹೇಳಿದ್ದಾರೆ. ಇದರ ಅರ್ಥವೇನೆಂದರೆ:—ದೇಹವೇ ನಾನೆಂದು ತಿಳಿದ ಹೊರತು ಯಾವನೂ ವ್ಯವಹಾರ ಮಾಡುವದಿಲ್ಲ. ಒಮ್ಮೆ ಈ ಭಾವನೆಯುಂಟಾದೊಡನೆ ಲೌಕಿಕ ವ್ಯವಹಾರವೆಲ್ಲ ಚನ್ನಾಗಿ ಸಾಗುತ್ತದೆ. ಈ ಭಾವನೆಗನುಸರಿಸಿ ಕೆಲವು ಪದಾರ್ಥಗಳು ತನಗೆ ಹಿತಕಾರಕವಾದವು

ಗಳೆಂದೂ, ಮತ್ತೆ ಕೆಲವು ಅಹಿತಕಾರಕವಾದವುಗಳೆಂದೂ ಮನುಷ್ಯನು ನಿಶ್ಚಯಿಸುತ್ತಾನೆ. ಯಾವು ದೇಹಕ್ಕೆ ಅನುಕೂಲ ಸಂವೇದನೆಯನ್ನು ಉಂಟುಮಾಡುವವೋ ಅವೇ ಉಪಕಾರಕ ಪದಾರ್ಥಗಳು. ಯಾವು ವಿಪರೀತ ಸಂವೇದನೆಯನ್ನುಂಟುಮಾಡುವವೋ ಅವೇ ಅಪಕಾರಕ ಪದಾರ್ಥಗಳು. ಆ ಮೇಲೆ ಉಪಕಾರಕ ಪದಾರ್ಥಗಳನ್ನು ದೊರಕಿಸ ಬೇಕೆಂದೂ, ದೊರಕಿದವುಗಳನ್ನು ಕಾಯ್ದುಕೊಳ್ಳಬೇಕೆಂದೂ, ಅಪಕಾರಕ ಪದಾರ್ಥಗಳನ್ನು ದೂರಮಾಡಬೇಕೆಂದೂ, ದೂರಾದವುಗಳನ್ನು ಮತ್ತೆ ಸಮೀಪಕ್ಕೆ ಬರಗೊಡಬಾರದೆಂದೂ ಮನುಷ್ಯನು ಕರ್ಮಗಳನ್ನು ಮಾಡ ತೊಡಗುತ್ತಾನೆ. ಅದರಿಂದಲೇ ಪಾಪ ಪುಣ್ಯಗಳಾಗುತ್ತವೆ. ಆ ಪುಣ್ಯ ಪಾಪಗಳಿಂದ ಮತ್ತೆ ದೇಹವು ಬರುತ್ತದೆ. ಹೀಗೆಯೇ ಈ ಸಂಸಾರವು ಒಂದೇ ಸಮನೆ ಅಖಂಡವಾಗಿ ನಡೆದೇ ಇರುತ್ತದೆ.

ಹೀಗೆ 'ನಾನೆ'ಂಬದು ನಿಜವಾಗಿ ಅಂತಃಕರಣದ ಧರ್ಮವಾಗಿದ್ದು, ಅದನ್ನು ಆತ್ಮದ ಧರ್ಮವೆಂದು—ಎಂದರೆ ನಮ್ಮ ಸ್ವರೂಪವೆಂದು ತಿಳಿ ಯುವದೇ ಅವಿದ್ಯೆ ಅಥವಾ ಅಜ್ಞಾನವು. ಈ ತಿಳಿಗೇಡಿತನದಿಂದಲೇ ನಮಗೆ ಬಾಹ್ಯಪದಾರ್ಥಗಳ ಬಗ್ಗೆ ಇಚ್ಛೆಯುತ್ಪನ್ನವಾಗುವದು. ಆ ಇಚ್ಛೆಯಿಂದಲೇ ನಾವು ಕರ್ಮಗಳನ್ನು ಮಾಡುವೆವು. ಬಾಹ್ಯವಿಷಯ ಗಳ ಬಗ್ಗೆ ಹುಟ್ಟುವ ಕಾಮ ಅಥವಾ ಇಚ್ಛೆಯ ಮೂಲಕವಾಗಿಯೇ "ನನ್ನದು" ಎಂಬ ತಪ್ಪು ತಿಳುವಳಿಕೆಯು ಹುಟ್ಟುವದು. ನಾನು-ನನ್ನದು ಎಂಬ ಕಲ್ಪನೆಯ ಸಂಗಡಲೇ ಪರರು-ಪರರದು ಎಂಬ ಕಲ್ಪನೆಯು ಹುಟ್ಟುವದು. ಅದರಿಂದಲೇ ಸಂಸಾರದೊಳಗೆ ಕಂಡುಬರುವ ಅನೇಕ ಅನರ್ಥಗಳು ಸಂಭವಿಸುವವು. ಮನುಷ್ಯನ ಇಚ್ಛೆ ಅಥವಾ ವಾಸನೆಗಳು ತೃಪ್ತವಾಗುವದು ಅಪರೂಪವೇ. ಆದುದರಿಂದ ಅವು ಹಾಗೆಯೇ ಅಂತಃಕರಣದಲ್ಲಿ ಉಳಿಯುತ್ತ ಹೋಗುತ್ತವೆ. ಹೀಗೆ ನಮ್ಮ ಅಂತಃ ಕರಣವು ಹಿಂದಿನಿಂದ ಅನೇಕ ಜನ್ಮಗಳ ವಾಸನೆಗಳನ್ನೂ ಸಂಸ್ಕಾರ ಗಳನ್ನೂ ಹಿಡಿದುಕೊಂಡೇ ಕೆಲಸ ಮಾಡುತ್ತಿರುತ್ತದೆ. ಇವು ಪ್ರತಿ

ಯೊಬ್ಬನವು ಬೇರೆಬೇರೆಯಾಗಿರುವದರಿಂದ, ಪ್ರತಿಯೊಬ್ಬರ 'ನಾನೆ'ಂಬದು ಬೇರೆಬೇರೆಯಾಗಿರುತ್ತದೆ. ಅದೇ ಎಲ್ಲ ದ್ವೈತದ-ದುಃಖದ ಮೂಲವು. ಇದನ್ನು ಸರಿಯಾಗಿ ತಿಳಿದುಕೊಂಡು ಬೇರು ಸಹಿತವಾಗಿ ಕಿತ್ತುಹಾಕು ವದೇ ಸಾಧಕರ ಕರ್ತವ್ಯವು.

ಈ ರೀತಿಯಿಂದ ವಿಚಾರಮಾಡಿ ನೋಡಿದರೆ ಬಾಹ್ಯಜಗತ್ತಿನೊಡನೆ ಸಂಬಂಧ ಬೆಳಿಸಿ ವ್ಯವಹಾರ ಮಾಡುವದೆಲ್ಲ ಅಂತಃಕರಣದ ಈ 'ನಾನೆ'ಂಬ ವೃತ್ತಿಯೇ ಸರಿಯೆಂದು ನಿಶ್ಚಯವಾಗದಿರದು. "ತಿಳಿದದ್ದು ತಿಳಿಯು ತ್ತದೆ" ಎಂಬ ವ್ಯವಹಾರವು ಇಲ್ಲಿ ಮಾತ್ರ ಸಂಭವಿಸುತ್ತದೆ. "ನಾನು ರೂಪವನ್ನು ನೋಡುತ್ತಿರುವೆನು" ಅಥವಾ "ಶಬ್ದವನ್ನು ಕೇಳುತ್ತಿರು ವೆನು" ಎಂಬದೂ ಕೂಡಾ ನನಗೆ ತಿಳಿಯುತ್ತದೆ. ಹೆಚ್ಚು ಜಾಗೃತಿ ಯಿಂದ ಪರಿಶೀಲಿಸುವವರಿಗೆ ಈ ಮಾತು ಸಹಜವಾಗಿ ಗೊತ್ತಾಗುವಂತಿದೆ. ಈ ಅನುಭವವನ್ನು ಕಂಡುಹಿಡಿಯುವದು ಬಲು ಮಹತ್ವದ ಮಾತು. ಇಲ್ಲಿ ರೂಪವನ್ನು ನೋಡುವವನು ಅಥವಾ ಶಬ್ದವನ್ನು ಕೇಳುವವನು ಆತ್ಮಚೈತನ್ಯದ ಆಭಾಸದಿಂದೊಡಗೂಡಿದ 'ನಾನೆ'ಂಬ ಅಂತಃಕರಣ ವೃತ್ತಿಯು. ರೂಪವನ್ನು ನೋಡುವ ಅಥವಾ ಶಬ್ದವನ್ನು ಕೇಳುವ ಕ್ರಿಯೆಯ ಕರ್ತೃವು ಈ 'ನಾನೆ'ಂಬ ವೃತ್ತಿಯೇ ಸರಿ. ಆ ವೃತ್ತಿಯು ಬಾಹ್ಯಜಗತ್ತಿನೊಡನೆ ಮಾಡುವ ವ್ಯವಹಾರವನ್ನು ನೋಡುವವನೇ ಸಾಕ್ಷಿಯು. ಅವನೇ ಕೂಟಸ್ಥಜ್ಯೋತಿಯಾದ ಆತ್ಮನು.

ಜ್ಞಾನೇಂದ್ರಿಯಗಳ ದ್ವಾರದಿಂದ ಮೊದಲು ನಮ್ಮ ಅಂತಃಕರಣದ ಮೇಲೆ ಸಂಸ್ಕಾರಗಳು ಉಂಟಾಗುತ್ತವೆ. 'ನಾನೆ'ಂಬ ವೃತ್ತಿಯನ್ನು ತಳೆದ ಅಂತಃಕರಣವೇ ಈ ಸಂಸ್ಕಾರಗಳನ್ನು ಮಾಡಿಕೊಳ್ಳುತ್ತದೆಂದು ಮೇಲೆ ಹೇಳಿದ್ದೇವೆ. ಅಂತಃಕರಣದ ವ್ಯಾಪಾರಗಳನ್ನು ತುಸು ಸೂಕ್ಷ್ಮ ವಾಗಿ ವಿಚಾರಿಸಹತ್ತಿದರೆ ಅವುಗಳಲ್ಲಿ ಸ್ಥೂಲವಾಗಿ ಒಟ್ಟು ಮೂರು ಭಾಗಗಳನ್ನು ಮಾಡಬಹುದು.

(೧) ಜ್ಞಾನೇಂದ್ರಿಯಗಳಿಂದ ಬಾಹ್ಯಪದಾರ್ಥಗಳ ಜ್ಞಾನವುಂಟಾಗಿ, ಆ ಸಂಸ್ಕಾರಗಳನ್ನೆಲ್ಲ ಮುಂದಿಟ್ಟುಕೊಂಡು ಅವುಗಳ ಜೋಡಣೆ ಮಾಡಿ, ಅವುಗಳನ್ನು ಹೋಲಿಸಿ ಒಂದಕ್ಕೊಂದು ಸರಿಹಚ್ಚಿ ನೋಡುವದಕ್ಕಾಗಿ ಕ್ರಮಪಡಿಸುವದು.

(೨) ಆ ಮೇಲೆ ಅವುಗಳಿಂದಾಗುವ ಹಿತಾಹಿತಗಳೆಂಬ ಪರಿಣಾಮ ಗಳನ್ನು ಪರೀಕ್ಷಿಸಿ ಯಾವದು ಮಾಡಲಿಕ್ಕೆ ಯೋಗ್ಯವು, ಯಾವದು ಅಯೋಗ್ಯವು, ಎಂಬದನ್ನು ನಿಶ್ಚಯಿಸುವದು.

(೩) ಮೇಲಿನಂತೆ ನಿಶ್ಚಿತವಾದ ಬಳಿಕ ಬೇಕಾದ ವಸ್ತುಗಳನ್ನು ದೊರಕಿಸಲಿಕ್ಕೂ ಬೇಡಾದವುಗಳನ್ನು ದೂರಪಡಿಸಲಿಕ್ಕೂ ಇಚ್ಛೆಯು ಉಂಟಾಗಿ ಅದರಂತೆ ಮಾಡಬೇಕೆಂಬ ಪ್ರವೃತ್ತಿಯುಂಟಾಗುವದು.

"ಈ ಮೂರೂ ಕ್ರಿಯೆಗಳು ಬಿಟ್ಟೂಬಿಡದೆ ಒಂದರ ಹಿಂದೊಂದು ಕ್ರಮವಾಗಿ ಆಗಬೇಕೆಂತಿಲ್ಲ. ಹಿಂದೆ ಯಾವದೋ ಒಂದು ಕಾಲದಲ್ಲಿ ನೋಡಿದ ಪದಾರ್ಥವು ಈ ದಿನ ಬೇಕಾಗಬಹುದು. ಆದರೆ ಅಷ್ಟರಿಂದ ಈ ಮೂರು ಕ್ರಿಯೆಗಳಲ್ಲಿ ಯಾವದೊಂದು ಅನವಶ್ಯಕವಾದುದೆಂದು ಮಾತ್ರ ಹೇಳಲಿಕ್ಕಾಗುವದಿಲ್ಲ." ಈ ಮೂರು ಕ್ರಿಯೆಗಳಲ್ಲಿ ಮೊದಲನೆಯ ಮತ್ತು ಮೂರನೆಯ ವ್ಯಾಪಾರಗಳನ್ನು ಮಾಡುವ ಅಂತಃಕರಣವೃತ್ತಿಗೆ ಮನಸ್ಸೆ'ಂಬ ಪಾರಿಭಾಷಿಕವಾದ ಹೆಸರನ್ನು ಕೊಡುವ ರೂಢಿಯುಂಟು. ೨ನೆಯ ಅಥವಾ ನಡುವಿನ ಕ್ರಿಯೆಯನ್ನು ಮಾಡುವ ಅಂತಃಕರಣಕ್ಕೆ 'ಬುದ್ಧಿ'ಯೆಂಬ ಹೆಸರು ಶಾಸ್ತ್ರೀಯ ಭಾಷೆಯಲ್ಲಿ ಕೊಡಲ್ಪಡುತ್ತಿರುವ ದುಂಟು. ಹೀಗೆ ನಿಶ್ಚಯಮಾಡುವ ಕೆಲಸವೇ ಬುದ್ಧಿಯದು. ಜ್ಞಾನೇಂ ದ್ರಿಯಗಳಲ್ಲಿ ಮನಸ್ಸು ಸಂಕಲ್ಪವಿಕಲ್ಪರೂಪವಾಗಿಯೂ ಕರ್ಮೇಂ ದ್ರಿಯಗಳ ಪ್ರವರ್ತಕವಾಗಿಯೂ ಇರುತ್ತದೆ. ಇನ್ನು ಕೊನೆಯ ವೃತ್ತಿ ಯೆಂದರೆ ಚಿತ್ತವು. ಹಿಂದಿನ ಮಾತುಗಳನ್ನು ಚಿಂತನೆಮಾಡುವ ಅಂತಃ ಕರಣವೃತ್ತಿಗೆ ಈ ಹೆಸರು ಕೊಡುವದುಂಟು. ಕನಸಿನೊಳಗಿನ ವ್ಯಾಪಾರ ವೆಲ್ಲ ಚಿತ್ತವೃತ್ತಿಯೇ ಸರಿ. ಎಚ್ಚರಿಕೆಯಲ್ಲಿ ಕೂಡ ನಮ್ಮ ಅಂತಃ-ಕರಣವು ಒಮ್ಮೊಮ್ಮೆ ಈ ವ್ಯಾಪಾರವನ್ನು ಮಾಡುತ್ತಿರುತ್ತದೆ.

ಅಂತಃಕರಣವು ಸ್ವತಃ ಜಡವಾಗಿರುತ್ತದೆಂದು ಈ ಮೊದಲೇ ಹೇಳಿದ್ದೇವೆ. ಅದರ ವೃತ್ತಿಗಳು ಒಂದನ್ನೊಂದು ನೋಡಲಾರವು. ಅದರ ವೃತ್ತಿಗಳನ್ನೆಲ್ಲ ನಿರಪವಾದವಾಗಿ ಎಡೆಬಿಡದೆ ನೋಡುತ್ತಿರುವವನೇ ಸಾಕ್ಷೀ ಆತ್ಮನು. ಅಂತಃಕರಣದ ವೃತ್ತಿಗಳು ನಮಗೆ ದೃಶ್ಯವಾಗುವವೆಂಬದು ನಮ್ಮೆಲ್ಲರ ಅನುಭವದ ಮಾತು. ಆದುದರಿಂದ ಕೂಟಸ್ಥನಾದ ಆತ್ಮಜ್ಯೋತಿಯು ಇರುವದೇ ಇಲ್ಲೆಂದು ಹೇಳಲಿಕ್ಕಾಗುವದಿಲ್ಲ. ಎಂತೆಯೇ ಸಾಕ್ಷೀ ಆತ್ಮನು ಸ್ವತಃ ಸಿದ್ಧನೆಂದು ವೇದಾಂತಶಾಸ್ತ್ರವು ಹೇಳುತ್ತದೆ. ಅವನು ಇಲ್ಲೆಂದು ಹೇಳುವದು ಯಾರಿಗೂ ಸಾಧ್ಯವಿಲ್ಲ. ಅವನು ಇಲ್ಲೆಂದು ಹೇಳುವದಾದರೆ ನಮ್ಮೆಲ್ಲರ ಅನುಭವಕ್ಕೆ ಸರಿಯಾದ ಅರ್ಥವೇ ಹತ್ತುವದಿಲ್ಲ. ಹೀಗೆ ಕೊನೆಗೆ ಆತ್ಮನೊಬ್ಬನೇ ಸ್ವತಂತ್ರ ಪದಾರ್ಥವೆಂದೂ ಅವನು ಚಿನ್ಮಯ ಅಥವಾ ಜ್ಯೋತಿಃಸ್ವರೂಪನೆಂದೂ ಸಿದ್ಧವಾಗುತ್ತದೆ. 'ನಾನೆ'ಂಬ ವೃತ್ತಿಯೂ ಉಳಿದ ವೃತ್ತಿಗಳೂ ಈ ಆತ್ಮನಿಗೆ ಗೋಚರವಾಗುತ್ತವೆ. ಆದರೆ ಒಂದೇ ಕಾಲಕ್ಕೆ ಒಂದಕ್ಕಿಂತ ಹೆಚ್ಚು ವೃತ್ತಿಗಳಿರದ್ದರಿಂದಲೂ, ಒಂದು ಮತ್ತೊಂದು ವೃತ್ತಿಯನ್ನು ನೋಡಲಾರದಾದುದರಿಂದಲೂ, 'ನಾನೆ'ಂಬ ವೃತ್ತಿ ಎದ್ದಾಗ ಉಳಿದ ವೃತ್ತಿಗಳಿರುವದಿಲ್ಲ, ಉಳಿದ ವೃತ್ತಿಗಳಿದ್ದಾಗ ನಾನೆಂಬ ವೃತ್ತಿ ಇರುವದಿಲ್ಲ ಎಂದು ತಿಳಿಯಬೇಕು. ಎಂತೆಯೇ "ತಿಳಿದದ್ದು ತಿಳಿಯಿತು" ಎಂಬ ಅನುಭವವು 'ನಾನೆ'ಂಬದು ಮಾತ್ರ ಇದ್ದಾಗ ಆಗುವದೆಂದೂ, ಉಳಿದ ವೃತ್ತಿಗಳಿದ್ದಾಗ ಆ ವ್ಯಾಪಾರವು ಆಗುವದಿಲ್ಲೆಂದೂ ನಿಶ್ಚಯವಾಗದಿರದು. 'ನನಗೆ ಸುಖವಾಗುತ್ತದೆ, ದುಃಖವಾಗುತ್ತದೆ' ಎಂದಿಷ್ಟೇ ನಾವು ಹೇಳುವೆವಲ್ಲದೆ 'ನನಗೆ ಸುಖವಾದದ್ದು ತಿಳಿಯುತ್ತದೆ, ದುಃಖವಾದದ್ದು ತಿಳಿಯುತ್ತದೆ' ಎಂದು ಹೇಳುವದಿಲ್ಲ. ಹಾಗೆ ಹೇಳುವ ಕಾರಣವೂ ಇಲ್ಲ. 'ನನಗೆ ಸುಖವಾದದ್ದು ತಿಳಿಯುತ್ತದೆ' ಮತ್ತು 'ನನಗೆ ಸುಖವಾಗುತ್ತದೆ' ಎಂಬಲ್ಲಿ ಏನೂ ಹೆಚ್ಚು ಕಡಿಮೆಯೇ ಇರುವದಿಲ್ಲ. ಕಾರಣವೇನೆಂದರೆ:—'ನನಗೆ ಸುಖವು ಅನುಭವಕ್ಕೆ ಬರುತ್ತಿರುವದು, ಗೊತ್ತಾಗುತ್ತಿರುವದು' ಎಂದೇ 'ನನಗೆ ಸುಖವಾಗುತ್ತದೆ' ಎಂದು ಹೇಳುತ್ತೇವೆ.

ಈ ವಿಷಯವು ತುಸು ಕಠಿಣವಾಗಿರುತ್ತದೆಯೆಂಬದೇನೋ ಸರಿ. ಆದರೆ ಚನ್ನಾಗಿ ವಿಚಾರ ಮಾಡಿದರೆ ತಿಳಿಯದಿರಲಾರದು.

ಸಾರಾಂಶವೇನೆಂದರೆ:—ಈ ದೇಹದಲ್ಲಿ ಹತ್ತು ಇಂದ್ರಿಯಗಳು, ಪ್ರಾಣ ಮತ್ತು ಮನಸ್ಸೆಂಬ ತತ್ತ್ವಗಳಿರುವವೆಂದು ಕಂಡುಬರುತ್ತದೆ. ಅವಕ್ಕೂ ಮುಂದೆ ಹೋಗಿ ವಿಚಾರ ಮಾಡಹತ್ತಿದರೆ, ಇವು ಸ್ವತಂತ್ರ ವಾಗಿರುವದಿಲ್ಲೆಂತಲೂ, ಇವುಗಳ ಪ್ರೇರಕನು ಇನ್ನೊಬ್ಬನಿರುವನೆಂದೂ ಗೊತ್ತಾಗದಿರದು. ಅವನೇ ಆತ್ಮನು. ಅಂತಃಕರಣವು ತೈಜಸ ಪದಾರ್ಥ ವಿರುವದರಿಂದ ಆತ್ಮನ ಚೈತನ್ಯವನ್ನು ತನ್ನೊಳಗೆ ತೆಗೆದುಕೊಂಡು ಅದ ರೊಡನೆ ಕೂಡಿ ಹೋಗಿ ಒಂದಾದಂತೆ ಕಾಣಹತ್ತುವದು. ಕಾಯ್ದ ಕಬ್ಬಿಣದ ತುಂಡು ಸುಡುವ ಶಕ್ತಿಯನ್ನು ಅಗ್ನಿಯಿಂದ ತೆಗೆದುಕೊಂಡು ಹೇಗೆ ತಾನೇ ಸ್ವತಃ ಅಗ್ನಿಯಂತೆ ಕಾಣಹತ್ತುವದೋ, ಮತ್ತು ಎರಡ ನೆಯ ಪದಾರ್ಥಗಳನ್ನು ಸುಡಬಲ್ಲದೋ, ಹಾಗೆಯೇ ಅಂತಃಕರಣವು ಆತ್ಮನ ಚೈತನ್ಯದಿಂದೊಡಗೂಡಿ ಆತ್ಮನಂತೆಯೇ ಕಾಣಹತ್ತುವದು; ಮತ್ತು ಜ್ಞಾನೇಂದ್ರಿಯಗಳ ದ್ವಾರಾ ಎರಡನೆಯ ಪದಾರ್ಥಗಳನ್ನು ಅರಿಯುವ ಶಕ್ತಿಯುಳ್ಳದ್ದಾಗುವದು; ಹಾಗೂ ಕರ್ಮೇಂದ್ರಿಯಗಳ ಮುಖಾಂತರವಾಗಿ ಕೆಲಸ ಮಾಡುವ ಸಾಮರ್ಥ್ಯವುಳ್ಳದ್ದೂ ಆಗುತ್ತದೆ. ಒಂದೇ ವಿದ್ಯುಚ್ಛಕ್ತಿಯು ಉಪಾಧಿಗಳ ಮೂಲಕ ಗಿರಣಿ ಮೊದಲಾದವು ಗಳನ್ನು ನಡೆಯಿಸುವದು ಮತ್ತು ಪ್ರಕಾಶಿಸುವದು. ಹಾಗೆಯೇ ಅಂತಃ ಕರಣದೊಳಗೆ ಒಡಮೂಡಿರುವ ಆತ್ಮಚೈತನ್ಯವು ಜ್ಞಾನೇಂದ್ರಿಯಗಳ ದ್ವಾರದಿಂದ ಪದಾರ್ಥಗಳನ್ನರಿಯುವದು, ಮತ್ತು ಕರ್ಮೇಂದ್ರಿಯಗಳ ದ್ವಾರದಿಂದ ಕ್ರಿಯೆಯನ್ನು ಮಾಡುವದು, ಹೀಗೆ ಅಂತಃಕರಣದ ಚೇಷ್ಟೆ ಯೆಲ್ಲ ಆತ್ಮನ ಮೇಲೆಯೇ ಅವಲಂಬಿಸಿರುತ್ತದೆ.

ದೇಹದಲ್ಲಿ ಮೂರು ಪದಾರ್ಥಗಳು ಒಂದಕ್ಕೊಂದು ತಿಳಿಯದಂತೆ ಕೂಡಿಕೊಂಡಿರುತ್ತವೆ. ಕಾಯ್ದ ಕಬ್ಬಿಣದಲ್ಲಿ ಬೆಂಕಿ ಕಬ್ಬಿಣಗಳು ಹೇಗೆ

ಕೂಡಿಕೊಂಡಿರುವವೋ ಹಾಗೆ ಇಲ್ಲಿ ಸ್ಥೂಲದೇಹ, ಸಚೇತನ ಅಚೇತನ ವೆಂದು ದ್ವಿವಿಧರೂಪವಾಗಿ ಕೆಲಸ ಮಾಡುತ್ತಿರುವ ಅಂತಃಕರಣ ಮತ್ತು ಆತ್ಮಗಳು, ಸಹಜವಾಗಿ ಬೇರ್ಪಡಿಸಲಿಕ್ಕೆ ಬರದಂತೆ ಕೂಡಿಕೊಂಡಿರುತ್ತವೆ. ಮೇಲೆ ತೋರಿಸಿಕೊಟ್ಟಂತೆ 'ನಾನೆಂ'ಬದು ನಿಜವಾಗಿಯೂ ಅಂತಃಕರಣದ ವೃತ್ತಿಯಾಗಿದ್ದು ಅದನ್ನು ನಾವು ಒಮ್ಮೆ ದೇಹಕ್ಕೂ, ಒಮ್ಮೆ ಬುದ್ಧಿಗೂ, ಒಮ್ಮೆ ಆತ್ಮನಿಗೂ ಹಚ್ಚುತ್ತೇವೆ. ಮತ್ತು ಸಾಮಾನ್ಯವಾಗಿ ಇವುಗಳಲ್ಲಿ ಯಾವದನ್ನೂ ಸ್ಪಷ್ಟವಾಗಿ ವಿಷಯೀಕರಿಸದೆ "ನಾನೆಂ"ಬದನ್ನು ವ್ಯವಹಾರದಲ್ಲಿ ಉಪಯೋಗಿಸುತ್ತಿರುತ್ತೇವೆ. "ನಾನು, ನಾನು" ಎಂದು ಎಲ್ಲರೂ ಹೇಳುವರಷ್ಟೇ ? ಆದರೆ "ನಾನು" ಎಂದರೆ ಯಾರು, ಎಂದು ಕೇಳಿದೊಡನೆ ದಿಗಿಲು ಬೀಳುತ್ತದೆ. ಹೀಗೆ ಈ ಮೂರು ಪದಾರ್ಥಗಳಲ್ಲಿ ವಿವೇಕ ಮಾಡದೆ ನಾವು ಅವಿವೇಕದಿಂದಲೇ ವ್ಯವಹಾರ ಮಾಡುತ್ತಿರುತ್ತೇವೆ. ಈ ಮೂರು ಪದಾರ್ಥಗಳಲ್ಲಿ ದೇಹ ಮತ್ತು ಬುದ್ಧಿಗಳೆರಡೂ ಅನಾತ್ಮಗಳು. **ಹೀಗೆ ಆತ್ಮಾನಾತ್ಮಗಳ ಅವಿವೇಕ ಅಥವಾ ಅಧ್ಯಾಸದಿಂದಲೇ ಎಲ್ಲ ವ್ಯವಹಾರವು ನಡೆದಿರುತ್ತದೆ. ಆದುದರಿಂದ ಆತ್ಮಾನಾತ್ಮಗಳನ್ನು ವಿಂಗಡಿಸಿ ಆತ್ಮನನ್ನು ತಿಳಿದುಕೊಳ್ಳುವದೇ ಮೋಕ್ಷದ ಸಾಧನವು.**

ಲೌಕಿಕ ವೈದಿಕ ವ್ಯವಹಾರವೆಲ್ಲ ಈ ಆತ್ಮಾನಾತ್ಮಗಳ ಅವಿವೇಕ ಮತ್ತು ಅಧ್ಯಾಸಗಳ ಮೇಲೆಯೇ ನಿಂತಿರುವದೆಂದು ಶ್ರೀಮಚ್ಛಂಕರ ಭಗವತ್ಪಾದರ ಸಿದ್ಧಾಂತವು. ಅವಿವೇಕವೆಂದರೆ ಆತ್ಮಾನಾತ್ಮಗಳನ್ನು ಸರಿಯಾಗಿ ವಿಂಗಡಿಸಿ ತಿಳಿದುಕೊಳ್ಳದಿರುವದು. ಅಧ್ಯಾಸವೆಂದರೆ ಒಂದು ಪದಾರ್ಥ ಅಥವಾ ಅದರ ಗುಣಧರ್ಮಗಳ ಮೇಲೆ ಮತ್ತೊಂದು ಪದಾರ್ಥ ಅಥವಾ ಅದರ ಗುಣಧರ್ಮಗಳನ್ನು ಹೇರುವದು. ಅವಿವೇಕದಿಂದ ಅಧ್ಯಾಸವಾಗುವದು. ಒಂದರಿಂದೊಂದು ಪದಾರ್ಥವನ್ನು ಬಿಡಿಬಿಡಿಸಿ ಸರಿಯಾಗಿ ತಿಳಿದುಕೊಂಡರೆ ಅಧ್ಯಾಸವಾಗುವ ಕಾರಣವೇ ಇಲ್ಲ. ಇದಕ್ಕೆ ಅವಿದ್ಯೆಯೆಂದೂ ಅಜ್ಞಾನವೆಂದೂ ಹೆಸರು. ಅಜ್ಞಾನ ಅಥವಾ

ಅವಿದ್ಯೆಯೇ ಎಲ್ಲ ಸಂಸಾರದ ಮೂಲವು. ಅದರ ನಾಶವೇ ಮೋಕ್ಷವು. ಈ ಅಜ್ಞಾನ ಅಥವಾ ಅವಿದ್ಯೆಯು ಎಲ್ಲಿಂದ ಬಂತೆಂಬದನ್ನು ವಿಚಾರಿಸುತ್ತ ಕೂಡುವ ಕಾರಣವಿಲ್ಲ. ಆದರೆ ನಮ್ಮ ವ್ಯವಹಾರವೆಲ್ಲ ಅದರ ಮೇಲೆಯೇ ಅವಲಂಬಿಸಿರುವದೆಂಬದು ಮಾತ್ರ ಸ್ಪಷ್ಟವಾಗಿದೆ. ಅವಿದ್ಯೆಯು ನೈಸರ್ಗಿಕ ವಾಗಿದೆ; ಅನಾದಿಯಾಗಿದೆ. ಎಂದರೆ ಇಂತಹ ದಿವಸ ಇಷ್ಟೊತ್ತಿಗೆ ಅದು ಅಸ್ತಿತ್ವದಲ್ಲಿ ಬಂತೆಂದು ಹೇಳಲಿಕ್ಕೆ ಬರಲಾರದು. ಆದರೆ ವಿಚಾರಮಾಡ ಹತ್ತಿದೊಡನೆ ಅದು ಓಡಿಯೇ ಹೋಗುವದು. ಎಲ್ಲಿಯ ವರೆಗೆ ನಾವು ವಿಚಾರ ಮಾಡುವದಿಲ್ಲವೋ ಅಲ್ಲಿಯ ವರೆಗೆ ಮಾತ್ರ ಅದರ ಅಸ್ತಿತ್ವವು. ವಿಚಾರಸೂರ್ಯನು ಅವಿದ್ಯೆಯೆಂಬ ಕತ್ತಲೆಯನ್ನು ಹುಡುಕಹತ್ತಿದರೆ ಅವನಿಗೆ ಅದು ಎಂದೂ ಸಿಗುವದೇ ಶಕ್ಯವಿಲ್ಲ. ಕತ್ತಲೆಯು ಸೂರ್ಯನಿಗೆ ಗೋಚರವಾಗಬಹುದೇ ?*

ನಮ್ಮ ಅನುಭವದ ಪ್ರತಿಯೊಂದು ವಾಕ್ಯದೊಳಗೂ ಈ ಅವಿವೇಕವು ಇದ್ದೇ ಇರುವದೆಂಬದನ್ನು ತೋರಿಸಿಕೊಡಬಹುದು. ಉದಾ:—ನಾನು ರೂಪವನ್ನು ನೋಡುತ್ತೇನೆ. (ಇದರಲ್ಲಿ ಸದ್ಯಕ್ಕೆ ದೇಹೇಂದ್ರಿಯಗಳ ಮಾತನ್ನು ಬದಿಗಿಟ್ಟು ವಿಚಾರ ಮಾಡುವಾ.) ಈ ವಾಕ್ಯದಲ್ಲಿ ಎರಡು ಅಂಶಗಳು ಇರುತ್ತವೆ: ನೋಡುವ ಕ್ರಿಯೆಯು, ಮತ್ತು ನೋಡುವ ಸಾಮರ್ಥ್ಯವು. ಇವುಗಳಲ್ಲಿ ಮೊದಲಿನದು ಅಂತಃಕರಣದ್ದು. ಎಂದರೆ ನೋಡುವ ಕ್ರಿಯೆಯನ್ನು ಮಾಡುವದು ಅಂತಃಕರಣವು. ಆದರೆ ನೋಡುವ ಅಥವಾ ಅರಿಯುವ ಸಾಮರ್ಥ್ಯವು ಮಾತ್ರ ಅಂತಃಕರಣದ್ದಲ್ಲ, ಆತ್ಮನದು. ಕಾಯ್ದ ಕಬ್ಬಿಣದ ತುಂಡು ಮತ್ತೊಂದು ಪದಾರ್ಥವನ್ನು ಸುಡುವದೆಂದು ತಿಳಿಯುವಾ. ಅಲ್ಲಿ ಮತ್ತೊಂದು ವಸ್ತುವನ್ನು ಸುಡುವ ಪ್ರತ್ಯಕ್ಷ ಕ್ರಿಯೆಯು ಕಬ್ಬಿಣದ ತುಂಡಿನಿಂದಾಗುವದು. ಆದರೆ ಅದರೊಳ

---

* ಸೇಯಂ ಭ್ರಾಂತಿರ್ನಿರಾಲಂಬಾ ಸರ್ವನ್ಯಾಯವಿರೋಧಿನೀ ।
ಸಹತೇ ನ ವಿಚಾರಂ ಸಾ ತಮೋ ಯದ್ವದ್ದಿವಾಕರಮ್ ॥

—ನೈಷ್ಕರ್ಮ್ಯಸಿದ್ಧಿ ೩.೬೬.

ಗಿನ ಸುಡುವ ಶಕ್ತಿಯು ಮಾತ್ರ ಆದರದಲ್ಲ. ಸುಡುವ ಶಕ್ತಿಯು ಯಾವಾಗಾದರೂ ಬೆಂಕಿಯದೇ. ಬೆಂಕಿಯು ನಿತ್ಯವಾದ ಸುಡುವ ಶಕ್ತಿಯನ್ನು ಕಬ್ಬಿಣದ ತುಂಡು ಕೆಲಕಾಲ ಕಡ ತಕ್ಕೊಂಡು ತಾತ್ಪೂರ್ತಿಕವಾಗಿ ಎರಡನೆಯ ವಸ್ತುಗಳನ್ನು ಸುಡುವಂತೆ ಅಂತಃಕರಣವು ಆತ್ಮನ ನಿತ್ಯ ತಿಳುವಳಿಕೆಯನ್ನು ಆ ಕಾಲದ ಪೂರ್ತೆ ಕಡ ತಕ್ಕೊಂಡು ವ್ಯವಹಾರ ಮಾಡುತ್ತದೆ. ಇದನ್ನು ತೋರಿಸುವದಕ್ಕಾಗಿಯೇ ಶ್ರೀಮಚ್ಛಂಕರ ಭಗವತ್ಪಾದರು ಆತ್ಮನದು ನಿತ್ಯದೃಷ್ಟಿಯೆಂದೂ, ಬುದ್ಧಿ ಅಥವಾ ಅಂತಃಕರಣದ್ದು ಅನಿತ್ಯದೃಷ್ಟಿಯೆಂದೂ, ಎಂತಲೇ ಆತ್ಮನು ದೃಷ್ಟಿಯ ದೃಷ್ಟಿ, ಕಿವಿಯ ಕಿವಿ, ಮೂಗಿನ ಮೂಗು, ನಾಲಿಗೆಯ ನಾಲಿಗೆ, ಚರ್ಮದ ಚರ್ಮ, ವಾಣಿಯ ವಾಣಿ, ಮನಸ್ಸಿನ ಮನಸ್ಸು ಎಂದು ಮೊದಲಾಗಿ ವರ್ಣಿಸಲ್ಪಟ್ಟಿರುವನೆಂದೂ ಹೇಳುತ್ತಾರೆ. ಇರಲಿ. ಹೀಗೆ ಈ ಎರಡೂ ಅಂಶಗಳನ್ನು ವಿಂಗಡಿಸದೆ ಮೇಲೆ ಹೇಳಿದಂತೆ 'ನಾನು ರೂಪವನ್ನು ನೋಡುತ್ತೇನೆ' ಎಂದು ವ್ಯವಹಾರ ಮಾಡುತ್ತೇವೆ. ಅದರಂತೆಯೇ 'ನಾನು ಸುಖಿ' 'ನಾನು ದುಃಖಿ' ಇತ್ಯಾದಿ ಎಲ್ಲ ಅನುಭವ ವಾಕ್ಯಗಳಲ್ಲಿಯೂ ನಾವು ಆತ್ಮಾನಾತ್ಮಗಳನ್ನೂ ಅವುಗಳ ಗುಣಧರ್ಮಗಳನ್ನೂ ಬೇರ್ಪಡಿಸದೆಯೇ ವ್ಯವಹಾರ ಮಾಡುತ್ತೇವೆ. ಹೀಗೆ ಎಲ್ಲ ವ್ಯವಹಾರಕ್ಕೂ ಮೂಲವಾದ ಈ ಅವಿವೇಕವನ್ನು ಚನ್ನಾಗಿ ತಿಳಿದುಕೊಂಡು ಪ್ರತಿಕ್ಷಣದಲ್ಲಿಯೂ ನಾವು ಆತ್ಮಾನಾತ್ಮ ವಿವೇಕವನ್ನು ಮಾಡುತ್ತಿರಬೇಕು. ಆತ್ಮಾನಾತ್ಮ ವಿಚಾರದಿಂದಲೇ ಆತ್ಮತತ್ತ್ವದ ನಿಶ್ಚಯುವಾಗುವದು. ಹೀಗೆ ಪ್ರತಿಯೊಂದು ಅನುಭವದ ವಾಕ್ಯವನ್ನು ಹಿಡಿದು ನೋಡಿದರೂ ಅದಕ್ಕೆ ಅಧಿಷ್ಠಾನನಾಗಿ, ಆಧಾರನಾಗಿ, ಆತ್ಮನು ಇದ್ದೇ ಇರುವನೆಂದು ಕಂಡುಬರುವದು. ಇದನ್ನೇ ಬೇರೆ ಶಬ್ದಗಳಲ್ಲಿ ಹೇಳಬೇಕೆಂದರೆ—ಪ್ರತಿಯೊಂದು ಅಂತಃಕರಣವೃತ್ತಿಯನ್ನು ಹಿಡಿದು ನೋಡಿದರೂ, ಅದರ ಕೆಳಗೆ ಅದಕ್ಕೆ ಆಧಾರ ಅಥವಾ ಅಧಿಷ್ಠಾನನಾಗಿ ಆತ್ಮನು ಇದ್ದೇ ಇರುವನೆಂದು ಸಿದ್ಧವಾಗುತ್ತದೆ. ಈ ರೀತಿಯಾಗಿ ಅಂತಃಕರಣ ಮತ್ತು ಅದರ ವೃತ್ತಿಗಳನ್ನೆಲ್ಲ ಸಾಕ್ಷೀರೂಪ

ದಿಂದ ನೋಡುತ್ತಿರುವ ಆತ್ಮನ ಕಡೆಗೆ ಲಕ್ಷ್ಯಕೊಡಲೆತ್ನಿಸುವದೇ ನಿಜವಾದ ಅಭ್ಯಾಸವು. ಈ ಅಭ್ಯಾಸಕ್ಕೇ "ಸಾಕ್ಷೀ ಅನುಸಂಧಾನ" ವೆಂದು ಹೆಸರು. ಇಷ್ಟೇ ಅಲ್ಲ; "ಯಾರು ಈ ತೆರದಿಂದ ಪ್ರತಿಯೊಂದು ಅಂತಃಕರಣ ವ್ಯಾಪಾರದ ಅಧಿಷ್ಠಾನನೆಂದು ಆತ್ಮನನ್ನು ಸಾಕ್ಷಾತ್ಕರಿಸಿ ಕೊಳ್ಳುವರೋ ಅವರಿಗೇ ಆತ್ಮಜ್ಞಾನವಾಗಿರುವದೆಂದು ಹೇಳಬೇಕು; ಅವರಿಗೇ ಮೋಕ್ಷವು; ಉಳಿದವರಿಗಲ್ಲ" ಎಂದು ಕೇನೋಪನಿಷತ್ತು ಸಾರಿ ಸಾರಿ ಹೇಳುತ್ತದೆ. "ಪ್ರತಿಬೋಧವಿದಿತಂ ಮತಂ ಅಮೃತತ್ವಂ ಹಿ ವಿಂದತೇ."



ಪರಮಾರ್ಥ ದೃಷ್ಟಿಯಿಂದ ವಿಚಾರ ಮಾಡಹತ್ತಿದರೆ ವಸ್ತುತಃ ಜೀವನೆಂಬ ಸ್ವತಂತ್ರ ಪದಾರ್ಥವು ಇರುವದೇ ಇಲ್ಲ. ಇರುವದೆಲ್ಲ "ಔಪನಿಷದಪುರುಷ"ವೊಂದೇ. ಅದಕ್ಕೇ ಬ್ರಹ್ಮವೆಂದೂ ಆತ್ಮ ವೆಂದೂ ಹೆಸರು. ಬೃಹದಾರಣ್ಯಕೋಪನಿಷದ್ಭಾಷ್ಯದೊಳಗೆ (೨-೧-೨೦)ರ ಮೇಲಿನ ಭಾಷ್ಯದಲ್ಲಿ ಈ ಪ್ರಶ್ನೆಯನ್ನು ಭಾಷ್ಯಕಾರರು ಬಲು ಸರಸ ವಾಗಿಯೂ, ವಿಸ್ತಾರಪೂರ್ವಕವಾಗಿಯೂ ಚರ್ಚಿಸಿ ಕೊನೆಗೆ ಕೊಡುವ ಪರಮ ನಿರ್ಣಯವೇನೆಂದರೆ:—

ತಸ್ಮಾತ್ ಪರಬ್ರಹ್ಮವ್ಯತಿರೇಕೇಣ ಸಂಸಾರೀನಾಮನಾನ್ಯದ್ ವಸ್ತ್ವಂತರಮಸ್ತಿ ॥

ಜೀವವೆಂಬುವದೊಂದು ವಸ್ತುವಿರುವದೆಂದು ತಿಳಿಯುವದೇ ಅವಿದ್ಯೆಯು. ಮೇಲೆ ತೋರಿಸಿದಂತೆ ವಿಚಾರ ಮಾಡಹತ್ತಿದೊಡನೆ ಪರಮಾತ್ಮನೇ ನಮ್ಮ ಸ್ವರೂಪವೆಂದು ಕಂಡು ಬರುತ್ತದೆ. ಆದರೆ ವಿಚಾರ ಮಾಡುವ ಮೊದಲು, ಇನ್ನೂ ಅವಿದ್ಯಾವಸ್ಥೆಯಲ್ಲಿರುವಾಗ ಮಾತ್ರ ಜೀವನೆಂಬುದೊಂದು ಇರಬೇಕೆಂದು ತಪ್ಪು ತಿಳುವಳಿಕೆಯು ಉಂಟಾಗುವದು. ಆದುದರಿಂದ ಜಾಣರಾದ ಸಾಧಕರು ಈ ಜೀವದ ಗೊಂದಲಕ್ಕೆ ಬೀಳಬಾರದು. ಜೀವನೆಂಬುದೇ ಇಲ್ಲವೆಂದ ಮೇಲೆ ಅದರ ಲಕ್ಷಣವನ್ನಾಗಲಿ, ಸ್ವರೂಪವನ್ನಾಗಲಿ ಹುಡುಕುತ್ತ ಕೊಡು

ವದು ದಡ್ಡತನವೇ ಸರಿ. ನಿಷ್ಕಾರಣವಾಗಿ ಗೊಂದಲದಲ್ಲಿ ಬೀಳಬೇಕೆನ್ನುವವರಿಗೆ ಆ ಬಗ್ಗೆ ಅನೇಕ ಗ್ರಂಥಗಳಿವೆ. ಜೀವನ ಬಗ್ಗೆ ಅವಚ್ಛೇದವಾದ, ಆಭಾಸವಾದ, ಮತ್ತು ಪ್ರತಿಬಿಂಬವಾದ, ಎಂಬ ಮೂರು ವಾದಗಳು ಅದ್ವೈತವೇದಾಂತಿಗಳಲ್ಲಿ ರೂಢವಾಗಿವೆ. ಆದರೆ ಅವುಗಳ ಸೂಕ್ಷ್ಮ ಭೇದಗಳನ್ನು ತಿಳಿಯಲಪೇಕ್ಷಿಸುವದೇ ದಡ್ಡತನವು. ಜಲತಾಡನದಂತೆ ವ್ಯರ್ಥವು. ಈ ಎಲ್ಲ ಗೊಂದಲವನ್ನು ತಪ್ಪಿಸಿಕೊಂಡು ನೇರಾಗಿ ಆತ್ಮತತ್ವಕ್ಕೆ ಮುಟ್ಟುವದು ಶಕ್ಯವಿದೆ. ಅದನ್ನೇ ನಾನು ನಿಮಗೆ ತಿಳಿಸಿಕೊಡಲಿಕ್ಕೆ ಪ್ರಯತ್ನ ಮಾಡುತ್ತಿದ್ದೇನೆ. ಜೀವನ ಸ್ವರೂಪವನ್ನು ಹೇಳಲೇಬೇಕೆಂದರೆ ಆತ್ಮಾನಾತ್ಮಗಳ ಅವಿವೇಕವೇ, ದಡ್ಡಜನರ ತಿಳುವಳಿಕೆಯೇ ಅವನ ಸ್ವರೂಪವೆಂದು ಹೇಳಬಹುದು. *

---

 .... ೬

ಇಲ್ಲಿಯ ವರೆಗಿನ ವಿವರಣೆಯ ಮೇಲಿಂದ ಈ ದೇಹದಲ್ಲಿ ದಶೇಂದ್ರಿಯಗಳು, ಪ್ರಾಣ ಮತ್ತು ಮನಸ್ಸೆಂಬ ತತ್ತ್ವಗಳಿರುವವೆಂದೂ, ಅವೆಲ್ಲ ಸ್ವತಂತ್ರವಿರದ್ದರಿಂದ ಅವುಗಳ ಪ್ರೇರಕನೊಬ್ಬನು ಇರಬೇಕೆಂದು

---

* ಅನ್ಯೋ ಹಿ ಸ ಆತ್ಮಾ ಕಾರ್ಯಕರಣ ಸಂಘಾತಾಭಿಮಾನ ಸಂತಾನಾವಿಚ್ಛೇದ ಲಕ್ಷಣೋ ಅವಿವೇಕಾತ್ಮಕೋ ಬುದ್ಧ್ಯವಭಾಸಪ್ರಧಾನಃ ಚಕ್ಷುರಾದಿಕರಣೋ ನಿತ್ಯ ಚಿತ್ ಸ್ವರೂಪಾತ್ಮಾಂತಃಸಾರೋ ಯತ್ರಾನಿತ್ಯಂ ವಿಜ್ಞಾನಮವಭಾಸತೇ । ಬೌದ್ಧ ಪ್ರತ್ಯಯಾನಾಂ ಆವಿರ್ಭಾವತಿರೋಭಾವಧರ್ಮಕತ್ವಾತ್ ತದ್ಧರ್ಮತಯೈವ ವಿಲಕ್ಷಣ ಮಪಿ ಚಾವಭಾಸತೇ ।........ ಬುದ್ಧ್ಯಾತ್ಮಾ........ ಪ್ರತ್ಯಯೈಃ ಆವಿರ್ಭಾವತಿರೋಭಾವಧರ್ಮಕೈಃ ವಿಜ್ಞಾನಾಭಾಸ ರೂಪೈಃ ಅನಿತ್ಯೈಃ ಅನಿತ್ಯವಿಜ್ಞಾನ ಆತ್ಮಾ ಸುಖೀ ದುಃಖೀ ಇತಿ ಅಭ್ಯುಪಗತೋ ಲೌಕಿಕೈಃ ।... —ಕೇನೋಪನಿಷದ್‌ಭಾಷ್ಯ. ೧.೪.

ಜೀವನನ್ನು ಕನ್ನಡಿಯೊಳಗೆ ಒಡಮೂಡಿರುವ ಸೂರ್ಯಪ್ರತಿಬಿಂಬಕ್ಕೆ ಹೋಲಿಸಿದರೆ, ವೃತ್ತಿಯನ್ನು ಕನ್ನಡಿಯಿಂದ ಪರಾವರ್ತನವಾಗುವ ಬೆಳಕಿನ ಸಮೂಹಕ್ಕೆ ಹೋಲಿಸಬಹುದು.

ಸಿದ್ಧವಾಗುವದೆಂಗೂ, ಅವನಿಗೇ ಆತ್ಮನೆನಸಬೇಕೆಂದೂ ಗೊತ್ತಾಗಿರಬಹುದು. ಇನ್ನು ಈ ಆತ್ಮತತ್ತ್ವವನ್ನೇ ಕುರಿತು ಇನ್ನಷ್ಟು ವಿಚಾರ ಮಾಡುವಾ.

ಕೇನೋಪನಿಷತ್ತಾದರೂ ಇಲ್ಲಿಂದಲೇ ಹೊರಡುತ್ತದೆ. ಅದರ ಮೊದಲನೆಯ ಶ್ಲೋಕ ಅಥವಾ ಮಂತ್ರದಲ್ಲಿ ಶಿಷ್ಯನು ಗುರುವಿಗೆ ನಮಸ್ಕಾರ ಮಾಡಿ ಕೇಳುವದೇನೆಂದರೆ: ಯಾವನ ಇಚ್ಛೆಯಿಂದ, ಯಾರ ಪ್ರೇರಣೆಯಿಂದ ಮನಸ್ಸು ತನ್ನ ವ್ಯಾಪಾರಗಳಲ್ಲಿ ತೊಡಗುವದು? ಯಾರ ಆಜ್ಞೆಯಿಂದ ಮುಖ್ಯ ಪ್ರಾಣವು ತನ್ನ ಕಾರ್ಯಗಳನ್ನು ಮಾಡುವದು? ಯಾರ ಇಚ್ಛೆಯಿಂದ ಜನರು ಮಾತುಗಳನ್ನು ಮಾತಾಡುತ್ತಾರೆ? ಯಾವ ತೇಜೋಮಯನು ಕಣ್ಣು ಕಿವಿಗಳಿಗೆ ತಮ್ಮ ತಮ್ಮ ಕೆಲಸಗಳನ್ನು ಮಾಡಹಚ್ಚುವನು?

ಇದಕ್ಕೆ ಗುರುವು ಕೊಡುವ ಉತ್ತರವು ಬಲು ಸುಂದರವಾಗಿದೆ: ಆತ್ಮವೆಂಬ ಒಂದೇ ತತ್ತ್ವವು ಇವೆಲ್ಲ ಕೆಲಸಗಳನ್ನೂ ಮಾಡುವದು. ಸ್ವಯಂಪ್ರಕಾಶನಾದ ಅವನಿಂದಲೇ ಈ ದೇಹದೊಳಗಿನ ಎಲ್ಲ ವ್ಯಾಪಾರಗಳು ನಡೆದಿರುತ್ತವೆ. ಆದರೆ ಅವನನ್ನು ಮಾತ್ರ ಸಾಕ್ಷಾತ್ತಾಗಿ ಇದ್ದಕ್ಕಿದ್ದಂತೆ ವರ್ಣಿಸುವದು ಶಕ್ಯವಿಲ್ಲ. ಅವನು ಸರ್ವಪ್ರೇರಕನಾಗಿದ್ದರೂ ಅತೀಂದ್ರಿಯನಾಗಿರುವನು. ಅವನನ್ನು ವರ್ಣಿಸುವ ಒಂದೇ ಮಾರ್ಗವೆಂದರೆ ಈ ಇಂದ್ರಿಯಗಳ ವ್ಯಾಪಾರವೇ ಸರಿ. ಇವೆಲ್ಲವುಗಳಿಗೆ ಯಾವನು ಪ್ರೇರಕನಾಗಿರುವನೋ, ಯಾವನಿಂದ ಇವು ತಮ್ಮ ಕೆಲಸಗಳನ್ನು ಮಾಡುವವೋ, ಅವನೇ ಆತ್ಮನು. ಎಂತೆಯೇ ಅವನು ಕಿವಿಯ ಕಿವಿಯು; ಮನಸ್ಸಿನ ಮನಸ್ಸು; ವಾಣಿಯ ವಾಣಿ; ಪ್ರಾಣದ ಪ್ರಾಣವು; ಕಣ್ಣಿನ ಕಣ್ಣು; ಆತ್ಮನನ್ನು ಇದಕ್ಕಿಂತ ಎರಡನೆಯ ಯಾವ ತೆರದಿಂದಲೂ ವರ್ಣಿಸಿ ಹೇಳುವದು ಶಕ್ಯವಿಲ್ಲ. ಆದುದರಿಂದ ಜಾಣರಾದವರು ದೇಹೇಂದ್ರಿಯ ಪ್ರಾಣ ಮನಸ್ಸುಗಳಲ್ಲಿ ಆತ್ಮಭಾವವನ್ನಿಡದೆ, ಅವುಗಳಾಚೆಗಿರುವ ಆತ್ಮನ ಮೇಲೆಯೇ ದೃಷ್ಟಿಯನ್ನಿಟ್ಟು ಈ ಲೋಕದಿಂದ

ತೆರಳಿ ಅಮೃತತ್ವವನ್ನು ಪಡೆಯುವರು. ಅಲ್ಲಿ ಎಂದರೆ ಆ ಬ್ರಹ್ಮವು ಇದ್ದಲ್ಲಿ ನಮ್ಮ ದೃಷ್ಟಿಯು ಹೋಗಲರಿಯದು. ಅಲ್ಲಿ ವಾಣಿಯು ಆಟವೂ ನಡೆಯದು. ಮನಸೂ ಅಲ್ಲಿಯ ವರೆಗೆ ಹೋಗಿ ಮುಟ್ಟಲಾರದು. ಅದು ನಮಗೆ ಗೊತ್ತಾಗಿರುವದಿಲ್ಲ. ಅದನ್ನು ಶಿಷ್ಯರಿಗೆ ಹೇಗೆ ತಿಳಿಸಿ ಕೊಡಬೇಕೆಂಬದೂ ನಮಗೆ ಗೊತ್ತಾಗಲೊಲ್ಲದು. ಅದು ಜ್ಞಾತಾಜ್ಞಾತ ವೆಂಬ ಎರಡೂ ಪದಾರ್ಥಗಳ ಆಚೆಗೆ ಇರುವದು. ನಮಗೆ ಆ ಜ್ಞಾನ ವನ್ನು ಹೇಳಿಕೊಟ್ಟ ಪೂಜ್ಯರಿಂದ ನಾವು ಹೀಗೆ ಕೇಳಿರುತ್ತೇವೆ. ಯಾವ ದನ್ನು ವಾಣಿಯು ವ್ಯಕ್ತಪಡಿಸಲಾರದೋ, ಆದರೆ ಯಾತರಿಂದಲೇ ವಾಣಿಯು ಪ್ರಕಟವಾಗುವದೋ ಅದೇ ಬ್ರಹ್ಮವೆಂದು ನೀನು ತಿಳಿ. ಜನರು ಯಾವದನ್ನು ಬ್ರಹ್ಮವೆಂದು ಉಪಾಸಿಸುತ್ತಿರುವರೋ ಅದು ಬ್ರಹ್ಮವಲ್ಲ. ಯಾವದು ಮನಸ್ಸಿನ ಸಹಾಯದಿಂದ ತಿಳಿಯಲ್ಪಡ ಲಾರದೋ, ಆದರೆ ಯಾವದು ಮನಸ್ಸನ್ನೇ ಅರಿಯುವದೆಂದು (ಬಲ್ಲವರು) ಹೇಳುವರೋ, ಅದೇ ಬ್ರಹ್ಮವೆಂದು ನೀನು ತಿಳಿ. ಜನರು ಯಾವದನ್ನು ಬ್ರಹ್ಮವೆಂದು ಪೂಜೆಗೈಯ್ವರೋ ಅದು ಬ್ರಹ್ಮವಲ್ಲ. ಯಾವದು ಕಣ್ಣಿ ನಿಂದ ನೋಡಲ್ಪಡಲಾರದೋ, ಆದರೆ ಕಣ್ಣುಗಳನ್ನೇ ಯಾವದು ನೋಡಬಲ್ಲದೋ ಅದೇ ಬ್ರಹ್ಮವೆಂದು ನೀನು ತಿಳಿ. ಬ್ರಹ್ಮವೆಂದು ಜನರು ಯಾವದನ್ನು ಪೂಜಿಸುವರೋ ಅದು ಬ್ರಹ್ಮವಲ್ಲ. ಯಾವದನ್ನು ಕಿವಿಯಿಂದ ಕೇಳಲಾಗುವದಿಲ್ಲವೋ, ಆದರೆ ಕಿವಿಯನ್ನೇ ಯಾವದು ಅರಿ ಯುವದೋ ಅದೇ ಬ್ರಹ್ಮವೆಂದು ನೀನು ತಿಳಿ. ಜನರು ಯಾವದನ್ನು ಬ್ರಹ್ಮವೆಂದು ಪೂಜಿಸುವರೋ ಅದು ಬ್ರಹ್ಮವಲ್ಲ. ಯಾವದನ್ನು ಶ್ವಾಸೋಚ್ಛ್ವಾಸವು ಅರಿಯಲಾರದೋ, ಯಾವುದೇ ಶ್ವಾಸೋಚ್ಛ್ವಾಸದ ಆಧಾರವಾಗಿರುವದೋ ಅದೇ ಬ್ರಹ್ಮವೆಂದು ನೀನು ತಿಳಿ. ಜನರು ಯಾವ ದನ್ನು ಬ್ರಹ್ಮವೆಂದು ತಿಳಿದು ಪೂಜಿಸುವರೋ ಅದು ಬ್ರಹ್ಮವಲ್ಲ. ಆದರೆ ಇಷ್ಟರ ಮೇಲಿಂದ 'ನನಗೆ ಬ್ರಹ್ಮಜ್ಞಾನವಾಯಿತು' ಎಂದು ನೀನು ತಿಳಿದುಕೊಂಡರೆ ಅದು ತಪ್ಪು. ಅದರ ಮೇಲಿಂದ ನಿನಗೆ ಬ್ರಹ್ಮಜ್ಞಾನವು ತೀರ ಸ್ವಲ್ಪಮಾತ್ರವಾಗಿರುವದೆಂದು ಹೇಳಬಹುದು. ಆದುದರಿಂದ ಬರೇ

ಅನುಮಾನದಿಂದ ದೇಹೇಂದ್ರಿಯ, ಪ್ರಾಣ, ಮನಸುಗಳ ಮೂಲವಾಗಿರುವದೇ ಬ್ರಹ್ಮವೆಂದು ತಿಳಿದರೆ ಸಾಲದು. ನೀನು ಇನ್ನೂ ಹೆಚ್ಚು ಅಭ್ಯಾಸ ಮಾಡಿ ಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು.

ಅದಕ್ಕೆ ಶಿಷ್ಯನು ಅಭ್ಯಾಸಮಾಡಿ ಆತ್ಮಜ್ಞಾನವನ್ನು ಸಂಪಾದಿಸಿಕೊಂಡ ಮೇಲೆ ಹೇಳುತ್ತಾನೆ:—ನನಗೀಗ ತಿಳಿಯಿತು. ನನಗೆ ಬ್ರಹ್ಮವು ಚೆನ್ನಾಗಿ ತಿಳಿದಿರುವದೆಂದೂ ನಾನು ಹೇಳಲಾರೆನು; ಅಥವಾ ಅದು ತಿಳಿದಿಲ್ಲೆಂದೂ ಹೇಳಲಾರೆನು. ಇಷ್ಟೇ ಅಲ್ಲ; ನಮ್ಮೊಳಗೆ ಯಾವನು ಹೀಗೆ, ಎಂದರೆ—ಆ ಬ್ರಹ್ಮವು ತಿಳಿದಿದೆಯೆಂದಾಗಲಿ, ತಿಳಿದಿಲ್ಲವೆಂದಾಗಲಿ ಹೇಳಲಿಕ್ಕೆ ಬರದಂತೆ ತಿಳಿದಿದೆಯೆಂದು ತಿಳಿದುಕೊಂಡಿರುವನೋ, ಅವನಿಗೇ ಬ್ರಹ್ಮವು ನಿಜವಾಗಿ ತಿಳಿದಿದೆಯೆಂದು ತಿಳಿಯಬೇಕು.

ಹೀಗೆ ಇಲ್ಲಿಯವರೆಗೆ ಶ್ರುತಿಯು ಗುರುಶಿಷ್ಯ ಸಂವಾದರೂಪದಿಂದ ತತ್ವಜ್ಞಾನವನ್ನು ತಿಳಿಸಿಕೊಟ್ಟು ಮುಂದೆ ತಾನೇ ಹೇಳುವದೇನಂದರೆ:- ಯಾರು ತಮಗೆ ಇದು ತಿಳಿದಿಲ್ಲವೆಂದು ತಿಳಿಯುವರೋ ಅವರಿಗೆ ಇದು ತಿಳಿದಿರುವದು. ತಮಗೆ ತಿಳಿದಿರುವದೆಂದು ಯಾರು ತಿಳಿದಿರುವರೋ ಅವರಿಗೆ ಇದು ತಿಳಿದಿಲ್ಲ. ಇದನ್ನರಿತಿರುವೆವೆನ್ನುವವರಿಗೆ ಇದು ಅಜ್ಞಾತವು. ಇದನರಿತಿಲ್ಲವೆನ್ನುವವರಿಗೆ ಇದು ವಿಜ್ಞಾತವು. ಪ್ರತಿ ಒಂದು ಅನುಭವ ಅಥವಾ ಜ್ಞಾನದ ಕಾಲಕ್ಕೆ ಅದಕ್ಕೆ ಅಧಿಷ್ಠಾನನಾಗಿ ಅದರ ಸಾಕ್ಷಿಯಾಗಿರುವ ಆತ್ಮನನ್ನು ಯಾರು ತಿಳಿದುಕೊಳ್ಳುವರೋ ಅವರಿಗೇ ಬ್ರಹ್ಮಜ್ಞಾನವಾಯಿತೆಂದು ತಿಳಿದುಕೊಳ್ಳಬೇಕು. ಈ ಅಂತಃಕರಣ ವೃತ್ತಿಗಳ ಸಹಾಯದಿಂದಲೇ ಅವುಗಳಿಗೆಲ್ಲ ಅಖಂಡವಾಗಿ ಸಾಕ್ಷಿಯಾಗಿರುವ ಚಿನ್ಮಾತ್ರ ಸ್ವರೂಪಿಯಾಗಿರುವ ಅವಿಕ್ರಿಯ ಆತ್ಮ ಅಥವಾ ಪರಬ್ರಹ್ಮನನ್ನು ತಿಳಿದುಕೊಳ್ಳಬೇಕಲ್ಲದೆ, ಇದರ ಹೊರತು ಆತ್ಮಜ್ಞಾನಕ್ಕೆ ಇನ್ನೊಂದು ಮಾರ್ಗವೇ ಇಲ್ಲ. ಇಂತಹ ಬ್ರಹ್ಮನನ್ನು ತಿಳಿದವನಿಗೇ ಮೋಕ್ಷವು. ಆತ್ಮಸ್ವರೂಪಪ್ರಾಪ್ತಿಯಿಂದ ಬಲವೂ, ಜ್ಞಾನದಿಂದ ಮೋಕ್ಷವೂ ಸಿಕ್ಕುವವು. ಆತ್ಮಸಾಕ್ಷಾತ್ಕಾರವನ್ನು ಇಲ್ಲಿಯೇ ಇದೇ

ಜನ್ಮದಲ್ಲಿಯೇ ಮಾಡಿಕೊಳ್ಳುವದು ಸಾಧ್ಯವಿದೆ, ಶಕ್ಯವಿದೆ. ಹಾಗೆ ಮಾಡಿಕೊಂಡರೇ ಜನ್ಮವು ಸಫಲವು. ಇಲ್ಲವಾದರೆ ದೊಡ್ಡ ಆಪತ್ತಿಗೆ ಗುರಿಯಾಗಬೇಕಾಗುವದು. ಜಾಣರಾದವರು ಎಲ್ಲ ಪ್ರಾಣಿಗಳಲ್ಲಿಯೂ ಆತ್ಮತತ್ವವನ್ನೇ ನೋಡುತ್ತ ಮೃತ್ಯುಲೋಕದಿಂದ ತೆರಳಿ ಅಮೃತತ್ವವನ್ನು ಹೊಂದುತ್ತಾರೆ.

ಮೇಲಿನ ಕೇನೋಪನಿಷತ್ತಿನ ಸಾರದಿಂದ ಉಪನಿಷತ್ತಿನೊಳಗಿನ ಶುದ್ಧ ಜ್ಞಾನ ಸಾಂಪ್ರದಾಯದ ಮಾದರಿಯು ಗೊತ್ತಾಗುವಂತಿದೆ. ಈ ಉಪನಿಷತ್ತಿನೊಳಗೆ ಒಟ್ಟಿಗೆ ನಾಲ್ಕು ಖಂಡಗಳಿದ್ದು, ಅವುಗಳಲ್ಲಿ ಮೊದಲನೆಯ ಎರಡು ಖಂಡಗಳ ಸಾರವನ್ನು ನಾನು ಹೇಳಿದ್ದೇನೆ. ಇನ್ನುಳಿದ ಎರಡು ಖಂಡಗಳು ಮೇಲಿನ ಮಾತುಗಳನ್ನೇ ರೂಪಕದಿಂದ ಹೇಳಿ ಉಪಾಸನೆಯನ್ನು ಹೇಳಿಕೊಡುವವು. ಆದುದರಿಂದ ಮೂರುನಾಲ್ಕು ಖಂಡಗಳ ಚರ್ಚೆಯೇನೂ ಸದ್ಯಕ್ಕೆ ಅವಶ್ಯಕವಿಲ್ಲ.

ಆತ್ಮಾನಾತ್ಮಗಳ ವಿವೇಕವನ್ನು ಮಾಡುತ್ತ ಹೋದರೆ ಅಂತಃಕರಣ ಮತ್ತು ಅದರ ವೃತ್ತಿಗಳನ್ನೂ ಪ್ರಾಣವನ್ನೂ ನೋಡುತ್ತಿರುವ ಸಾಕ್ಷೀ ಆತ್ಮನೊಬ್ಬನಿರಬೇಕೆಂಬದು ಸಿದ್ಧವಾಗುವದು. ಅವನು ದೇಹೇಂದ್ರಿಯ, ಪ್ರಾಣ, ಮನಸ್ಸುಗಳ ಪ್ರೇರಕನು ತಾನಾಗಿ ಅವೆಲ್ಲಕ್ಕೂ ಅಗೋಚರನಾಗಿರುವನು. "ಇವುಗಳ ಉದ್ಭವವು ಅವನಿಂದಲೇ ಇರುವದು. ಇವುಗಳ ಸಂಚಾಲಕನಾದರೂ ಅವನೇ ಇರುವನು. ನಮ್ಮ ಸಕಲ ಶಕ್ತಿಗಳನ್ನು ದಾಟಿ ಅವುಗಳಾಚೆಗಿರುವವನೇ ಪರಬ್ರಹ್ಮನು." ಜನರು ನಿಷ್ಕಾರಣವಾಗಿ ನಮ್ಮ ದೇವರು ದೊಡ್ಡವನು, ನಮ್ಮ ದೇವರು ದೊಡ್ಡವನು, ಎಂದು ಅಜ್ಞಾನದಿಂದ ಅನೇಕಾನೇಕ ದೇವತೆಗಳನ್ನು ಭಜಿಸುವರು. ಇಂತಹ ಎಲ್ಲ ದೇವತೆಗಳಾಚೆಗಿರುವ ಸಚ್ಚಿದಾನಂದರೂಪ ಪರಮಾತ್ಮನೊಬ್ಬನೇ ಸತ್ಯವಸ್ತುವು. ಅವನ ಜ್ಞಾನವೇ ಜ್ಞಾನವು. ಅವನನ್ನರಿಯುವದೇ ನಮ್ಮ ಪರಮ ಕರ್ತವ್ಯವು.

ವೇದಾಂತದ ಒಳದಾರಿ

ಆದರೆ ಇಷ್ಟರಿಂದ ಆತ್ಮನಿಗೆ ಅಂತಃಕರಣವನ್ನೂ ಅದರ ವೃತ್ತಿಗಳನ್ನೂ ಬೆಳಗುವ ಅಥವಾ ನೋಡುವದೊಂದು ದೊಡ್ಡ ಕೆಲಸವೇ ಗಂಟುಬಿದ್ದಿರುವದೆಂದು ಯಾರೂ ತಿಳಿಯಬಾರದು. ಸೂರ್ಯನು ಪ್ರಕಾಶಿಸುತ್ತಾನೆ, ಪ್ರಕಾಶಿಸುವದಿಲ್ಲ, ಎಂಬ ವ್ಯವಹಾರಗಳು ಸೂರ್ಯನ ಬೆಳಕಿನೊಳಗೆ ವಸ್ತುಗಳು ಬರುವದರ ಮೇಲೆಯೂ ಬರದಿರುವದರ ಮೇಲೆಯೂ ಅವಲಂಬಿಸಿರುತ್ತವೆ. ಪ್ರಕಾಶ್ಯಪದಾರ್ಥಗಳ ಸಾಮೀಪ್ಯ ಅಥವಾ ಅಸಾಮೀಪ್ಯಗಳೆಂಬ ಉಪಾಧಿಗಳ ದೃಷ್ಟಿಯಿಂದಲೇ ಸೂರ್ಯನು ಬೆಳಗುತ್ತಾನೆ, ಬೆಳಗುವದಿಲ್ಲ, ಎಂದು ನಾವು ಹೇಳುತ್ತೇವೆಯೇ ಹೊರತು, ಸೂರ್ಯನ ದೃಷ್ಟಿಯಿಂದಲ್ಲ. ಪ್ರಕಾಶ್ಯವಸ್ತುಗಳು ಸಮೀಪದಲ್ಲಿ ಬರಲಿ, ಬಿಡಲಿ, ಸೂರ್ಯನು ಸ್ವಾಭಾವಿಕವಾಗಿ ಒಂದೇ ಸವನೆ ಹೊಳೆಯುತ್ತಲೇ ಇರುತ್ತಾನೆ. ಎಂತೆಯೇ 'ಬೆಳಗುವ' ಕ್ರಿಯೆಗೆ ಸೂರ್ಯನು ಕರ್ತೃವಾಗುವನೆಂದು ಯಾರೂ ಎಣಿಸುವದಿಲ್ಲ. ಹಾಗೆಯೇ ಆತ್ಮನಿಗೂ ಅಂತಃಕರಣಕ್ಕೂ ಸಂಬಂಧವಿರುವದೆಂದು ತಿಳಿಯಬೇಕು. ಹೊರಗಿನಿಂದ ಹೊರಟವರಿಗೆ ಆತ್ಮತತ್ತ್ವಕ್ಕೆ ಹೋಗಿ ಮುಟ್ಟುವಾಗ ಅಂತಃಕರಣದ ಸಹಾಯವು ಬೇಕಾಗುವದು. ಅಂತಃಕರಣವನ್ನು ದಾಟಿ ಆತ್ಮನನ್ನು ಒಮ್ಮೆ ಅರಿತುಕೊಂಡಮೇಲೆ ಅಂತಃಕರಣದ ಆವಶ್ಯಕತೆಯೇನೂ ಉಳಿಯುವದಿಲ್ಲ. ಈ ಸಾಕ್ಷೀ ಆತ್ಮನಲ್ಲಿ ಅವಸ್ಥೆ, ದೇಶ, ಕಾಲ ಮೊದಲಾದ ಭೇದಕ್ಕೆ ಆಧಾರವಾಗಿರುವ ಯಾವೂ ಕಲ್ಪನೆಗಳಿರುವದಿಲ್ಲ. ಅದು ಅಖಂಡ ಸಚ್ಚಿದಾನಂದ ವಸ್ತುವಾಗಿರುವದು. ಅದು ಅನಂತವು, ಅಪಾರವು, ದಿವ್ಯವು, ನಿಷ್ಕಲವು, ನಿರಂಜನವು, ಸ್ಥೂಲ ಹ್ರಸ್ವ ಮೊದಲಾದ ಸಂಸಾರದ ಎಲ್ಲ ಧರ್ಮಗಳನ್ನೂ ದಾಟಿರುವಂತಹದು. ಇಂತಹ ತತ್ತ್ವವನ್ನು ಸಾಕ್ಷಾತ್ಕರಿಸಿಕೊಂಡವನ ಬಾಯಿಂದಲೇ 'ಅಹಂ ಬ್ರಹ್ಮಾಸ್ಮಿ' ಎಂಬ ಉದ್ಗಾರವು ಹೊರಡುತ್ತದೆ. ನಿಜವಾಗಿ ಇಲ್ಲಿ, ಒಳಗೆಂಬದಾಗಲಿ, ಹೊರಗೆಂಬದಾಗಲಿ ಇರುವದೇ ಇಲ್ಲ. ಎಲ್ಲವೂ ಒಂದೇ ಅಖಂಡ ರಸವಾದಾಗ ಭೇದದ ಕಲ್ಪನೆಯೆಲ್ಲಿಯದು?

ಈ ಆತ್ಮನು ಜ್ಞಾತಾಜ್ಞಾತ * ಪದಾರ್ಥಗಳ ಆಚೆಗಿರುವನು. ಇಂದ್ರಿಯ ಮತ್ತು ಅಂತಃಕರಣಕ್ಕೆ ಗೋಚರವಾಗುವ ಪದಾರ್ಥಗಳು ಜ್ಞಾತವೆಂದು ನಾವು ಸಾಮಾನ್ಯವಾಗಿ ಹೇಳುತ್ತೇವಷ್ಟೇ? ಈಗ ನನ್ನ ಕಣ್ಣಮುಂದೆ ಇರುವ ಪದಾರ್ಥಗಳು ನನಗೆ ಜ್ಞಾತವಾಗಿರುತ್ತವೆ. ಆದರೆ ಅದೇ ಕಗ್ಗತ್ತಲೆಯಲ್ಲಿ ಹೋಗಿ ನಿಂತೆವೆಂದರೆ ಅಲ್ಲಿ ಸಮೀಪದಲ್ಲಿರುವ ಪದಾರ್ಥಗಳು ಕೂಡ ತಿಳಿದುಬರುವದಿಲ್ಲ. ಅವುಗಳಿಗೆ ಆಗ "ಅಜ್ಞಾತ" ಪದಾರ್ಥಗಳೆನ್ನಬಹುದು. ಆದರೆ ಅದೇ ಅಲ್ಲಿ ಬೆಳಕು ಬಂದೊಡನೆ ಅವು 'ಜ್ಞಾತ'ವಾಗಲಿಕ್ಕೆ ತಡವಾಗುವದಿಲ್ಲ. ಎಂದರೆ ಈ ದೃಷ್ಟಿಯಿಂದ ಜ್ಞಾತಾಜ್ಞಾತ ಪದಾರ್ಥಗಳೆರಡೂ ಇಂದ್ರಿಯಗಳಿಗೆ ಗೋಚರವಾಗಬಹುದಾದ ವಿಷಯಗಳೇ. 'ಅಜ್ಞಾತ'ವೆಂದೆನ್ನುವಾಗ ಅವು ಕೆಲವೊಂದು ಪ್ರತಿಬಂಧಕ ಕಾರಣದಿಂದ ತಿಳಿಯದಂತಾಗಿರುತ್ತವೆ. ಆದರೆ ಆತ್ಮನು ಇವೆರಡೂ ಕೋಟಿಗಳನ್ನು ದಾಟಿರುವನು. ಯಾಕೆಂದರೆ ಮೇಲಿನ ಅರ್ಥದೊಳಗಿನ ಅಜ್ಞಾತ ಪದಾರ್ಥಗಳೂ ಕೂಡ ಒಂದಿಲ್ಲೊಂದು ಕಾಲಕ್ಕೆ ಇಂದ್ರಿಯಗಳಿಗೆ ಗೋಚರವಾಗತಕ್ಕಂಥವೇ. ಆದರೆ ಆತ್ಮನು ಎಂದೂ ಇಂದ್ರಿಯಗಳಿಗೆ ಗೋಚರನಾಗುವದಿಲ್ಲೆಂದು ಉಪನಿಷತ್ಕಾರರು ಹೇಳಿದ್ದಾರೆ.

ಆತ್ಮನು ನಮ್ಮೆಲ್ಲರ ಸ್ವರೂಪನೇ ಆಗಿರುವದರಿಂದ ಅವನನ್ನು ಯಾರೂ ಅಲ್ಲಗಳೆಯುವಂತಿಲ್ಲ. "ನಾನು ಇರುವದಿಲ್ಲ" ಎಂದು ಯಾರೂ ಹೇಳಲಾರರು. ಆದರೆ ಆತ್ಮನು ಯಾರು? ಎಂದೊಡನೆ ಮಾತ್ರ ಸಂದೇಹವುಂಟಾಗುತ್ತದೆ. ಆದುದರಿಂದ ಅವನನ್ನು ತಿಳಿದಿರುವೆವೆಂದಾಗಲಿ, ತಿಳಿ

---

* ಜ್ಞಾತವೆಂದರೆ ನಾಮರೂಪಗಳಿಂದ ವ್ಯಾಕೃತ ಅಥವಾ ಯುಕ್ತವಾದುದೆಂದೂ ಅಜ್ಞಾತವೆಂದರೆ ಅವ್ಯಾಕೃತಾವಸ್ಥೆಯಲ್ಲಿದ್ದವುಗಳೆಂದೂ ಶ್ರೀಶಂಕರಾಚಾರ್ಯರು ಅರ್ಥ ಮಾಡಿದ್ದಾರೆ. ಎಂದರೆ ಕಾರ್ಯಕಾರಣ ಸಂಬಂಧವನ್ನು ಆತ್ಮನು ದಾಟಿರುತ್ತಾನೆಂದು ಅರ್ಥವು. ನಾವು ಮೇಲೆ ಕೊಟ್ಟ ಅರ್ಥವು ತುಸು ಹಗುರಾಗಿದೆ. ಯಾವದನ್ನು ತೆಗೆದುಕೊಂಡರೂ ಅಡ್ಡಿಯಿಲ್ಲ.

ದಿಲ್ಲವೆಂದಾಗಲಿ, ಹೇಳಲಿಕ್ಕೆ ಬರಲಾರದು. ತಿಳಿದಿರುವನೆಂದರೆ ಉಳಿದೆಲ್ಲ ಪದಾರ್ಥಗಳಂತೆ ಇಂದ್ರಿಯಗಳ ಸಹಾಯದಿಂದ ತಿಳಿಯಲ್ಪಟ್ಟಿರುವದಿಲ್ಲ. ತಿಳಿದಿಲ್ಲವೆಂದರೆ ನಮ್ಮೆಲ್ಲರ ಸ್ವರೂಪನೇ ಆಗಿರುತ್ತಾನೆ. ಆದುದರಿಂದ ತಮಗೆ ಬ್ರಹ್ಮವು ತಿಳಿದಿರುವದು, ಎಂದು ಗರ್ವಪಡುವವರಿಗೆ ಅದು ಎಂದೂ ತಿಳಿಯಲಾರದು. ಬ್ರಹ್ಮಜ್ಞಾನವು ನನಗಾಗಿರುವದು, ನನಗಾಗಿರುವದು, ಎಂಬ ಸೊಕ್ಕಿನಿಂದ ಸೆಟೆಯುತ್ತಿರುವವರು ಬಹಳ ಮಂದಿ. ಆದರೆ ನಿಜವಾದ ಜ್ಞಾನಿಗಳು ಯಾರೆಂಬದನ್ನು ಹೇಗೆ ಕಂಡುಹಿಡಿಯಬೇಕೆಂಬದನ್ನು ಈ ಉಪನಿಷತ್ತಿನಲ್ಲಿ ಚನ್ನಾಗಿ ವರ್ಣಿಸಿದ್ದಾರೆ. ಬ್ರಹ್ಮಸ್ವರೂಪವು ಇಂದ್ರಿಯಾತೀತವೂ, ಅನಂತವೂ, ಅಖಂಡವೂ, ಅಪಾರವೂ ಇರುವದರಿಂದ, ಅದು ನಮಗೆ ತಿಳಿದಿಲ್ಲವೆಂದು ಸೌಜನ್ಯದಿಂದ ಹೇಳುವ ವಿನೀತರಾದ ಸಜ್ಜನರಿಗೆ ಮಾತ್ರ ಅದು ತಿಳಿದಿದೆಯೆಂದು ತಿಳಿಯಬೇಕೆಂದು ಉಪನಿಷತ್ಕಾರರು ಹೇಳಿದ್ದಾರೆ.

ಈ ಅನುಭವವು ಕೇವಲ ಅನುಮಾನಜ್ಞಾನದಿಂದ ಸಿಕ್ಕಲಾರದು. ಸಾಂಖ್ಯರು ತಮ್ಮ ತತ್ತ್ವಜ್ಞಾನಕ್ಕನುಸರಿಸಿ ಪ್ರಕೃತಿಪುರುಷ ವಿವೇಕ ಪೊಂದರಿಂದಲೇ ಆತ್ಮಜ್ಞಾನವೂ ಮೋಕ್ಷವೂ ಆಗುವವೆಂದು ಹೇಳುತ್ತಾರೆ. ಆದರೆ ಆದು ಅದ್ವೈತಿ–ವೇದಾಂತಿಗಳಿಗೆ ಸಮ್ಮತವಿಲ್ಲ. ಆತ್ಮಾನಾತ್ಮ ವಿವೇಕವು ಆವಶ್ಯಕವಾಗಿರುವದೆಂಬದು ಅದ್ವೈತಿಗಳಿಗೂ ಸಮ್ಮತವಿದೆ. ಆದರೆ ಅಷ್ಟರಿಂದಲೇ ಮೋಕ್ಷವಾಗಲಾರದೆಂದು ಅವರ ಅಭಿಪ್ರಾಯ. ಬರೇ ಆತ್ಮಾನಾತ್ಮ ವಿವೇಕದ ಮೇಲೆಯೇ ಕೈಯೂರಿ ಕುಳಿತು, ಅಂತಃಕರಣವನ್ನೂ, ಅದರ ವೃತ್ತಿಗಳನ್ನೂ ದಾಟಿ, ಅವುಗಳಿಗೆ ಸಾಕ್ಷಿಯಾಗಿರುವ ಆತ್ಮನೊಬ್ಬನು ಇರುವನೆಂದು ಅನುಮಾನಜ್ಞಾನ ಮಾಡಿಕೊಂಡರೆ ಸಾಲದು. ಈ ವಿಷಯದಲ್ಲಿ ಬರೇ ಅನುಮಾನದ ಮೇಲೆ ಕೈಯೂರುವ ಸಾಂಖ್ಯರು, ಕೊನೆಗೆ ಪ್ರಕೃತಿಪುರುಷನೆಂಬ ದ್ವೈತಕ್ಕೆ ಬಂದುಮುಟ್ಟಿದ್ದಾರೆ. ಅಂತಃಕರಣವನ್ನು ದಾಟಿದ ಚಿನ್ಮಯಪುರುಷನ ಕಲ್ಪನೆಯು ಅವರಿಗೆ ಸಿಕ್ಕರೂ, ಪ್ರಕೃತಿ ಅಥವಾ ಪ್ರಧಾನವೆಂಬ ಸ್ವತಂತ್ರ

ಜಡವಸ್ತುವೊಂದು ಇರುವದೆಂದೂ, ಅದು ಪುರುಷನಿಗೆ ಗಂಟುಬಿದ್ದಿರುವದೆಂದೂ ಸಾಂಖ್ಯರಿಗೆ ಹೇಳಬೇಕಾಗಿ ಬಂತು. ಮತ್ತು ವ್ಯಾವಹಾರಿಕ ಅನುಭವಕ್ಕನುಸರಿಸಿ ಅಸಂಖ್ಯ ಪುರುಷರಿರುವರೆಂಬ ಕಲ್ಪನೆಯನ್ನೂ ಸಾಂಖ್ಯರು ಒಪ್ಪಬೇಕಾಯಿತು. **ಆದುದರಿಂದ ಆತ್ಮಾನಾತ್ಮ ವಿವೇಕವನ್ನು ಮಾಡಿ, ಸಾಕ್ಷೀ ಆತ್ಮನ ಜ್ಞಾನವನ್ನು ಮಾಡಿಕೊಂಡರೆ "ತ್ವಂ" ಪದಾರ್ಥದ ಶೋಧನೆಯನ್ನು ಮಾತ್ರ ಮಾಡಿಕೊಂಡಂತೆ ಆಯಿತು.** ಅದಾದ ಮೇಲೂ ಅಂತಃಕರಣದಿಂದ ನಾನು ಅಲಿಪ್ತನಾಗಿದ್ದರೂ, ಅಂತಃಕರಣವೊಂದು ಗಂಟೇಬಿದ್ದಿರುವದೆಂದೂ, ಹೊರಗೆ ಜಗತ್ತು ಕಾಣುವದೆಂದೂ ನಮ್ಮ ತಿಳಿವಳಿಕೆಯಾಗುವ ಸಂಭವವಿದೆ. ಎಂತೆಯೇ ಎಷ್ಟೋ ಜನರು ಧ್ಯಾನಕಾಲಕ್ಕೆ ತಮಗೆ ಬ್ರಹ್ಮಾನುಭವವು ಬರುವದೆಂದು ಹೇಳುತ್ತಿದ್ದರೂ, ಕಣ್ಣು ತೆರೆದ ಕೂಡಲೇ ಪ್ರಪಂಚ ರಾಕ್ಷಸನು ಅವರ ಮುಂದೆ ನಿಲ್ಲುತ್ತಾನೆ! **ಆದುದರಿಂದ ಆತ್ಮಾನಾತ್ಮ ವಿವೇಕವಾದ ಮೇಲೂ ಮಹಾವಾಕ್ಯಜ್ಞಾನವು ಆವಶ್ಯಕವೆಂದು ವೇದಾಂತಿಗಳ ಅಂಬೋಣವಿದೆ.** ನಮ್ಮೆಲ್ಲರ ಹೃದಯದಲ್ಲಿ ಅನುಭವಕ್ಕೆ ಬರುತ್ತಿರುವ ಮತ್ತು ಅಂತಃಕರಣಕ್ಕೆ ಸಾಕ್ಷಿಯಾಗಿರುವ ಚಿನ್ಮಯ ಆತ್ಮನೇ, ಜಗತ್ತು ಉತ್ಪತ್ತಿಯಾಗುವ ಪೂರ್ವದಲ್ಲಿದ್ದ ಚಿನ್ಮಯ ಬ್ರಹ್ಮ ಅಥವಾ ಆತ್ಮವೆಂಬ ತತ್ತ್ವವಾಗಿತ್ತು, ಈಗಾದರೂ ಇದೆ, ಇನ್ನುಮುಂದಾದರೂ ಇರುವದು, ಎಂಬನೇ ಮಹಾವಾಕ್ಯದಿಂದಾಗುವ ಹಿರಿದಾದ ಜ್ಞಾನವು. **ಆದುದರಿಂದ ಆತ್ಮಾನಾತ್ಮ ವಿವೇಕವಾದ ಮೇಲೂ, ನಾವು ಹೊರಗೂ ಚಿನ್ಮಯ ಬ್ರಹ್ಮನನ್ನು ಕಾಣುವ ಅಭ್ಯಾಸವನ್ನು ಮಾಡಬೇಕಾಗುವದು.** ಒಳಗೂ ಹೊರಗೂ ಒಂದೇ ಒಂದಾದ ಅದ್ವಿತೀಯ ಚಿನ್ಮಯವಸ್ತುವಿರುವದೆಂದು ಅನುಭವಿಸಬೇಕಾದರೆ, ಮಹಾವಾಕ್ಯಜ್ಞಾನವೇ ಆವಶ್ಯಕವು. ಎಂತೆಯೇ ಕಣ್ಣಿನ ಕಣ್ಣು, ಕಿವಿಯ ಕಿವಿ, ಮನಸಿನ ಮನಸು, ಎಂದು ಮೊದಲಾಗಿ ವರ್ಣಿಸಲ್ಪಟ್ಟಿರುವ ವಸ್ತುವನ್ನು ನಮ್ಮೊಳಗೆ ಕಂಡುಕೊಂಡ ಮೇಲೆ, "ಎಲ್ಲ ಪ್ರಾಣಿಗಳಲ್ಲಿಯೂ ಅದೇ ತತ್ತ್ವವನ್ನು ಕಾಣಬೇಕು" ಎಂದು ಕೇನೋಪನಿಷತ್ತು ಹೇಳುತ್ತದೆ. ಇದೇ ಮಾತನ್ನೇ ನಿಮ್ಮ

ದೀಕ್ಷಿತರು ಅಂತರ್ಬಾಹ್ಯಬ್ರಹ್ಮನಿಷ್ಠೆಯೆಂದು ತಿಳಿಸಿ ಹೇಳಲು ಪ್ರಯತ್ನ ಪಡುತ್ತಾರೆ. ಎಂದರೆ ಮೊದಲು "ಅಹಂ ಬ್ರಹ್ಮಾಸ್ಮಿ—ನಾನು ಬ್ರಹ್ಮನಿದ್ದೇನೆ" ಎಂಬ ಅನುಭವ ಪಡೆಯಬೇಕು, ಆ ಮೇಲೆ "ಸರ್ವಂ ಖಲ್ವಿದಂ ಬ್ರಹ್ಮ—ಇದೆಲ್ಲವೂ ಬ್ರಹ್ಮವೇ—ನಾನೇ" ಎಂದು ಅನುಭವ ಪಡೆಯಬೇಕು. ಅಲ್ಲಿಗೆ ಅನುಭವವು ಪೂರ್ಣವಾದಂತಾಯಿತು. ಈ ಮಾತನ್ನು ಶ್ರೀಶಂಕರಾಚಾರ್ಯರು ತಮ್ಮ 'ಶತಶ್ಲೋಕೀ' ಎಂಬ ಗ್ರಂಥದ ೩ನೆಯ ಶ್ಲೋಕದಲ್ಲಿ ಹೇಳಿದ್ದಾರೆ.

ಒಳಗೆ ಬ್ರಹ್ಮಾನುಭವವನ್ನು ಪಡೆದ ಜ್ಞಾನಿಗೆ ಹೊರಗೆ ಸಹ ಎಲ್ಲವೂ ಬ್ರಹ್ಮಮಯವಾಗಿಯೇ ಕಾಣುವದು. ಹೊರಗೆ ಕಾಣಿಸುವ ನಾಮ ರೂಪಗಳೆಲ್ಲ ನಿಜವಾಗಿ ಜ್ಞಾನಸ್ವರೂಪವೇ ಆಗಿರುವವೆಂದೂ, ಅಖಂಡ ಜ್ಞಾನದ ಹೊರತಾಗಿ ಮತ್ತೊಂದು ಪದಾರ್ಥವೇ ಅವನ ಪಾಲಿಗೆ ಉಳಿದಿಲ್ಲವೆಂದೂ ಹೇಳಬಹುದು. ಎಂತೆಯೇ ಆತನ ಬಾಯಿಂದ "ಇದೆಲ್ಲವೂ ಬ್ರಹ್ಮವೇ—ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಉದ್ಗಾರವು ಹೊರಡುತ್ತದೆ. ಎಲ್ಲ ಚರಾಚರ ಪ್ರಾಣಿಗಳು ಅವನಿಗೆ ಆತ್ಮಸ್ವರೂಪವಾಗಿಯೇ ಕಾಣುತ್ತವೆ. ನಾಮರೂಪಗಳಿಂದ ಮಾತ್ರ ಬೇರೆ ಬೇರೆಯಾಗಿ ಕಾಣುವ ಪದಾರ್ಥಗಳು ಸ್ವತಂತ್ರವಾಗಿರುವದಿಲ್ಲ. ಜ್ಞೇಯ ಪದಾರ್ಥಗಳೆಲ್ಲ ಜ್ಞಾನವನ್ನಾಶ್ರಯಿಸಿಯೇ ಇರುವವು. ಜ್ಞೇಯ ಪದಾರ್ಥಗಳು ಬೇರೆ ಬೇರೆಯಾಗುತ್ತ ಹೋದರೂ ಜ್ಞಾನವೇನೂ ಬದಲಾಗುವದಿಲ್ಲ. ಜ್ಞಾನವನ್ನು ಬಿಟ್ಟು ಜ್ಞೇಯಗಳು ಎಂದೂ ಇರಲಾರವು. ಆದರೆ ಜ್ಞೇಯವನ್ನು ಬಿಟ್ಟು ಜ್ಞಾನವು ಮಾತ್ರ ಸ್ವತಂತ್ರವಾಗಿರುತ್ತದೆ * ಆದುದರಿಂದ ಹುಟ್ಟು ಸಾವುಗಳಿಲ್ಲದ ಚೈತನ್ಯಸ್ವರೂಪಿಯಾದ ಆತ್ಮನೇ ನಾಮರೂಪ ಮೊದಲಾದ ಉಪಾಧಿಗಳಿಂದ ಅನೇಕನಾಗಿ ಕಾಣಿಸುತ್ತಾನೆಂಬದು ನಿಶ್ಚಯವಾಗಿ ಗೊತ್ತಾಗುತ್ತದೆ. ನಾಮ ರೂಪಗಳನ್ನೇ ಮಾತ್ರ ನೋಡುವ ನಮ್ಮ ದೃಷ್ಟಿಯ ಅಭ್ಯಾಸ

* ಪ್ರಶ್ನೋಪನಿಷದ್ಭಾಷ್ಯ. ೬.೨ ನೋಡಿರಿ.

ವನ್ನು ನಾವು ಬದಲುಮಾಡಲಿಕ್ಕೆ ಕಲಿಯಬೇಕು. ನಮಗೆ ಗೋಚರವಾಗುವ ಪ್ರತಿಯೊಂದು ಪದಾರ್ಥದಲ್ಲಿ ಸತ್ ಮತ್ತು ಅಸತ್ ಎಂಬ ಎರಡಂಶಗಳಿರುವವೆಂದು ತಿಳಿಯಬಹುದು § ನಾಮರೂಪಗಳೆಲ್ಲ ಅಸದಂಶಗಳು. ಯಾಕೆಂದರೆ, ಅವು ಬೇಕುಬೇಕಾದಾಗ ಬದಲಾಗುತ್ತ ಹೋಗುವ ವಿಕಾರಗಳು. ನಾಮರೂಪಗಳನ್ನೆಲ್ಲ ಕಿತ್ತೊಗೆದುಬಿಟ್ಟರೆ ದ್ವೈತವೆಂಬುವದೇ ಜಗತ್ತಿನಲ್ಲಿ ಉಳಿಯಲಾರದು. ಹೀಗೆ ಎಲ್ಲ ನಾಮರೂಪಗಳು ಬದಲಾದರೂ, ಅವಕ್ಕೆಲ್ಲ ಆಧಾರವಾಗಿರುವ ಅಂಶವೇ ಸದಂಶವು. ಆದುದರಿಂದ ಜಗತ್ತಿನ ಎಲ್ಲ ದ್ವೈತಸ್ವರೂಪಿಯಾದ ನಾಮರೂಪಗಳಿಗೆ ಆಧಾರವಾಗಿ ಉಳಿಯುವದೇ ಸದ್ವಸ್ತುವು. ಅದೇ ಬ್ರಹ್ಮವು. ಹೀಗೆ ಈ ದೃಷ್ಟಿಯಿಂದ ವಿಚಾರ ಮಾಡಹತ್ತಿದರೆ ಈ ಜಗತ್ತೆಲ್ಲ ಪರಮಾತ್ಮರೂಪವೇ ಕಾಣಹತ್ತುವದೆಂಬದರಲ್ಲಿ ಸಂದೇಹವಿಲ್ಲ. ಎಂತೆಯೇ ಈಶಾವಾಸ್ಯೋಪನಿಷತ್ತು "ಈಶಾವಾಸ್ಯಮಿದಂ ಸರ್ವಂ ಯತ್ ಕಿಂಚ ಜಗತ್ಯಾಂ ಜಗತ್" ಎಂದು ಹೇಳುತ್ತದೆ. ಚರಾಚರ ಜಗತ್ತನ್ನೆಲ್ಲ ಪರಮೇಶ್ವರನಿಂದ ಮುಚ್ಚಿಬಿಡಬೇಕೆಂದು ಇದರ ಅರ್ಥವು. ನಾಮರೂಪಗಳನ್ನು ಬಿಟ್ಟು, ಅವಕ್ಕಾಧಾರವಾಗಿರುವ ವಸ್ತುವನ್ನು ಕಾಣಹತ್ತಿದೊಡನೆ "ಯತ್ರ ಯತ್ರ ಮನೋಯಾತಿ ಬ್ರಹ್ಮಣಸ್ತತ್ರ ದರ್ಶನಾತ್" ಎಲ್ಲೆಲ್ಲಿಯೂ ಬ್ರಹ್ಮವೇ ತೋರುವದು. ಆ ಸ್ಥಿತಿಯಲ್ಲಿ ಬ್ರಹ್ಮದರ್ಶನವಾಗಬಾರದೆಂದರೂ ಶಕ್ಯವಿಲ್ಲ. ಎಂತೆಯೇ ಉಪನಿಷತ್ಕಾರರು "ಬ್ರಹ್ಮ ವೇದ ಬ್ರಹ್ಮೈವ ಭವತಿ' ಎಂದರೆ 'ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ' ಎಂದು ಸಾರಿ ಸಾರಿ ಹೇಳಿದ್ದಾರೆ.

ಇಂತಹ ಸಾಕ್ಷಾತ್ಕಾರದ ಇಚ್ಛೆಯು ಎಲ್ಲರಿಗೂ ಇರುವದು ಸಹಜವಿದೆ. ಪರಮಾತ್ಮನು ನಮಗೆಲ್ಲರಿಗೂ ಆ ಇಚ್ಛೆಯನ್ನು ಪೂರ್ಣ ಮಾಡಿಕೊಳ್ಳುವ ಸಾಮರ್ಥ್ಯವನ್ನೂ ಮನೋದಾರ್ಢ್ಯವನ್ನೂ ಕೊಡಲೆಂದು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಶ್ರೀಮತ್ ಪರಮಹಂಸ

§ ಗೀತಾಭಾಷ್ಯ ೨.೧೬. ನೋಡಿರಿ.

ಶ್ರೀಪದ್ಮನಾಭತೀರ್ಥಸ್ವಾಮಿಯವರ ಕೃಪೆಯಿಂದ ಈ ತ್ರೈಮಾಸಿಕ ಪರಮಾರ್ಥಸಾಧನೆಯು ಯಶಸ್ವಿಯಾಗಿ ಮುಗಿಯಲಿ! ಎಲ್ಲೆಲ್ಲಿಯೂ ಪರಮಾರ್ಥದ ವಿಜಯವಾಗಲಿ !!

ನನಗೆ ಈ ಸಂದರ್ಭವನ್ನು ಒದಗಿಸಿಕೊಟ್ಟದ್ದಕ್ಕಾಗಿ ಶ್ರೀ ಯೋಗೀಶ್ವರ ದತ್ತಮೂರ್ತಿಗಳಿಗೂ ನಿಮಗೂ ಚಿರಋಣಿಯಾಗಿದ್ದೇನೆ. ಕೊನೆಗೆ ಯಾವ ದೇವರ ಕೃಪೆಯಿಂದ ನಾನಿದನ್ನೆಲ್ಲ ಮಾತಾಡಿದೆನೋ ಅದನ್ನು ಅವನಿಗೇ ಒಪ್ಪಿಸಿ ನನ್ನ ಪ್ರವಚನಗಳನ್ನು ಮುಗಿಸುತ್ತೇನೆ.

ಓಂ ತತ್ಸದ್ ಬ್ರಹ್ಮಾರ್ಪಣಮಸ್ತು.

ಯತ್ಕರೋಮಿ ಯದಶ್ನಾಮಿ ಯಜ್ಜುಹೋಮಿ ದದಾಮಿಯತ್ ।
ಯತ್ತಪಶ್ಯಾಮಿ ಶ್ರೀದತ್ತ ತತ್ಕರೋಮಿ ತ್ವದರ್ಪಣಮ್ ॥

ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಮ್

ಶ್ರೀಮಜ್ಜಗದ್ಗುರು ಶಂಕರಾಚಾರ್ಯಸ್ವಾಮೀ ಮಹಾರಾಜಕೀ ಜಯ.
ಶ್ರೀಮತ್ಪರಮಹಂಸ ಪದ್ಮನಾಭತೀರ್ಥಸ್ವಾಮೀ
ಗುರುಮಹಾರಾಜಕೀ ಜಯ.

ಸಚ್ಚಿದಾನಂದ ಸ್ವರೂಪ ಶ್ರೀ ಶಿವಾನಂದ ಸದ್ಗುರು ಮಹಾರಾಜಕೀಜಯ.

**ಶ್ರೀಗುರುದೇವ ದತ್ತ. ಶ್ರೀಗುರುದೇವ ದತ್ತ. ಶ್ರೀಗುರುದೇವ ದತ್ತ.**

ಓಂ
**ಕೇವಲ!**

| | | |
|---|---|---|
| ಅಖಂಡಾಶ್ರಮ | ೨೯—೧೨—೧೯೩೪ | ಕಾರವಾಡ. |
| ಶ್ರೀಮಠ, ಬಾಡ. | ಗುರುವಾರ | ಉತ್ತರ ಕನ್ನಡ. |

— ಮುಂದಿನ ಪುಟ ನೋಡಿ

# ಡಂಗುರ!

## ತ್ರೈಮಾಸಿಕ ಪರಮಾರ್ಥ ಸಾಧನೆಯ ಎರಡನೆಯ ಕ್ಯಾಂಪು

## ಶ್ರೀಸನ್ನಿಧಿಯಲ್ಲಿ—ಹರಿಹರಕ್ಷೇತ್ರ.

**ಇದೇ ಕಾರ್ತೀಕ ಪೌರ್ಣಿಮೆಯಿಂದ ಮಾಘ ಪೌರ್ಣಿಮಾ ೧೯೩೯ನೆಯ ನವ್ಹೆಂಬರ ೨೬ರಿಂದ ೧೯೪೦ನೆಯ ಫೆಬ್ರುವರಿ ೨೩.**

ಸಾಂಪ್ರದಾಯಿಕರ ಒತ್ತಾಯ ಮತ್ತು ಸಹಾಯದಿಂದ ಇನ್ನು ವರ್ಷಂಪ್ರತಿ ಮೂರು ತಿಂಗಳಿನ ಪರಮಾರ್ಥಸಾಧನೆಯ ವರ್ಗನಡೆಯಿಸುವದು ನಿಶ್ಚಿತವಾಗಿದೆ.

ಕಳೆದ ವರುಷ ಪರಮಗುರುಸ್ಥಾನವಾದ ಶ್ರೀಬಾಡಮಠದಲ್ಲಿ ಮೊದಲನೆಯ ಪ್ರಯೋಗ ಯಶಸ್ವಿಯಾಗಿ ಕೊನೆಗಂಡಿತು. ಅದರ ವಿವರಗಳನ್ನೊಳಗೊಂಡ ವರದಿ ಇನ್ನುಮುಂದಿನ ಸಹಾಯಕರ ಪಟ್ಟಿಯೊಂದಿಗೆ ಬೇಗಪ್ರಸಿದ್ಧಿಸಲ್ಪಡುತ್ತಿದೆ.

ವೇದಾಂತಸಾಧನೆಗಳ ಅನುಭವ ಪಡೆಯಲು ಹಾತೊರೆಯುವ ಯಾರೇ ಆಗಲಿ—ಮುಮುಕ್ಷುಗಳು ಅಗತ್ಯ ಬರಬೇಕು. ನಿಯಮಬದ್ಧರಾಗುವ ಹತ್ತು ಜನರಿಗೆ ಮಾತ್ರ ಪುಕ್ಕಟೆ ಪ್ರವೇಶ. ವಿಶೇಷ ನಿಯಮಗಳಿಗೆ ಪತ್ರವ್ಯವಹಾರ ಮಾಡಬೇಕು. ಉತ್ತರಕ್ಕೆ ೧ ಆಣೆ ಸ್ಟ್ಯಾಂಪು ಇಡುವದನ್ನು ಮರೆಯಬಾರದು. ಆಶ್ವೀಜ ಅಮಾವಾಸ್ಯೆಯ ನಂತರದ ಪತ್ರವ್ಯವಹಾರ ಗಮನಿಸಲಾಗುವದಿಲ್ಲ.

ಹಿರಿಯರ ಸನ್ನಿಧಿಯಲ್ಲಿಯೇ ಅವರ ನೇತೃತ್ವದಲ್ಲಿ ನಡೆಯುವ ಈ ಸಲದ ಸಾಧನವರ್ಗದಲ್ಲಿ ಸೇರಿ ಉಪನಿಷತ್ ಸಾಂಪ್ರದಾಯದ ಶುದ್ಧ ಅಧ್ಯಾತ್ಮವಿದ್ಯೆಯ ಸಾಫಲ್ಯವನ್ನು ಮನಗಾಣಬೇಕೆಂದು ನನ್ನ ಪ್ರಿಯ ಗುರುಬಂಧು ಹಾಗು ಪರಮ ಗುರುಬಂಧುಗಳನ್ನು ಸಲಿಗೆಯಿಂದ ಈ ಮೂಲಕ ಬಲವಂತಮಾಡಬಯಸುತ್ತೇನೆ.

ಶ್ರೀಶಿವಾನಂದಮಠ
ಹರಿಹರ
೧೫-೬-೧೯೩೯

ಓಂ-ದತ್ತಮೂರ್ತಿ,
ಅಖಂಡಾಶ್ರಮ ಬಾಡಮಠ, ಕಾರವಾಡ
ಪೋಷ್ಟ ಬಾಡ (ಉತ್ತರ ಕನ್ನಡ.)